ಶ್ರೀ ಸ್ವಾಮಿ ರಾಮಕೃಷ್ಣ ಪರಮಹಂಸರ

# ಸತ್ಕಥಾ-ಕುಸುಮ-ಮಂಜರಿ.



ಗ್ರಂಥಕರ್ತರು,

ನಾರಾಯಣ ವೆಂಕಟೇಶ ಕುರಡಿ.

ಬೆಲೆ ೧೦ ಆಣೆಗಳು.

ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ಮಾರಲಿಕ್ಕೆ
ಸಿಗುವ ಪುಸ್ತಕಗಳ

# ಕ್ರಯದ ಪಟ್ಟಿಯು.



**ಈ ಕೆಳಗೆ ಬರೆದ ೩೦ ಪುಸ್ತಕಗಳು ಮುಂಬಯಿ ವಿದ್ಯಾಖಾತೆಯವರಿಂದ ವಾಚನಾಲಯದ ಸಲುವಾಗಿ ಮಂಜೂರಾಗಿವೆ.**

| | ರೂ.ಆ.ಪೈ. |
|---|---|
| ೧ ಶಬ್ದಾನುಶಾಸನ | ೪-೦-೦ |
| ೨ ಪ್ರಾಚೀನ ಹಿಂದುಸ್ಥಾನ | ೧-೦-೦ |
| ೩ ಕಲ್ಯಾಣಿ | ೧-೦-೦ |
| ೪ ಶ್ರೀವಿದ್ಯಾರಣ್ಯ ಸ್ವಾಮಿಗಳ ಚರಿತ್ರೆ | ೧-೦-೦ |
| ೫ ಅಶೋಕ | ೧-೬-೦ |
| ೬ ಗ್ಲ್ಯಾಡಸ್ಟನ್ನನ ಚರಿತ್ರೆ | ೧-೦-೦ |
| ೭ ರಾಣಾರಾಜಸಿಂಹ | ೦-೧೨-೦ |
| ೮ ಶ್ರೇಯಃಸಾಧನ | ೦-೧೨-೦ |
| ೯ ಶ್ರೀರಾಮದಾಸ ಸ್ವಾಮಿಗಳ ಚರಿತ್ರೆ | ೦-೧೦-೦ |
| ೧೦ ಪ್ರೇಮಮಂದಿರ | ೦-೮-೦ |
| ೧೧ ಯಯಾತಿ ನಾಟಕಂ | ೦-೮-೦ |
| ೧೨ ಮಾನಸಶಾಸ್ತ್ರ | ೦-೮-೦ |
| ೧೩ ಸತ್ಯರಾಜಾಪೂರ್ವದೇಶದ ಚರಿತ್ರೆಗಳು ಭಾಗ ೧ | ೦-೮-೦ |
| ೧೪ ಭಾಗ ೨ | ೦-೮-೦ |
| ೧೫ ಎಂಟು ಸ್ತ್ರೀರತ್ನ | ೦-೬-೦ |
| ೧೬ ದಕ್ಷಿಣ ಮುಸಲ್ಮಾನ ರಾಜ್ಯ | ೦-೬-೦ |
| ೧೭ ಹಜರತ್ ಮಹಮ್ಮದ ಪೈಗಂಬರ ಚರಿತ್ರೆ | ೦-೬-೦ |
| ೧೮ ಕಾಳಿದಾಸ | ೦-೬-೦ |
| ೧೯ ಕಥಾಸರಿತ್ಸಾಗರ | ೦-೬-೦ |
| ೨೦ ಚಿತ್ತೂರ ಮುತ್ತಿಗೆ | ೦-೬-೦ |
| ೨೧ ಭಾರತೀಯ ವಿದುಷಿಯರು | ೦-೫-೦ |
| ೨೨ ಅಮೇರಿಕದೊಳಗಿನ ಬಡವಿದ್ಯಾರ್ಥಿಗಳು | ೦-೫-೦ |
| ೨೩ ವೇಣೀಬಂಧನ | ೦-೪-೦ |
| ೨೪ ಪಂಡಿತರಾಜ | ೦-೪-೦ |
| ೨೫ ಮೊಹರಮ್ | ೦-೩-೦ |
| ೨೬ ಶೀರಷಹ | ೦-೩-೦ |
| ೨೭ ಕಾದಂಬರಿ ( ಬಾಣಕವಿ ) | ೦-೧೦-೦ |
| ೨೮ ವೇಣೀಸಂಹಾರ ನಾಟಕ | ೧-೦-೦ |
| ೨೯ ಉತ್ತರರಾಮಚರಿತ್ರೆ ೨ನೆಯ ಆವೃತ್ತಿ | ೦-೧೨-೦ |
| ೩೦ ಕನ್ನಡ ತಮಿಳ ಮೊದಲನೇ ಪುಸ್ತಕ | ೦-೮-೦ |
| ೩೧ ಬೇಗಮ್ ಸಮರು | ೦-೬-೦ |
| ೩೨ ಮೋಹಿನೀನಿಂದಕರ ನಡಾವಳಿ | ೦-೮-೦ |
| ೩೩ ಗೃಹವೈದ್ಯಕ | ೦-೮-೦ |
| ೩೪ ಸತಿಯೂ ಸುನೀತಿಯು | ೦-೪-೦ |
| ೩೫ ಹರೀಶನಪ್ರೇಮ | ೦-೪-೦ |
| ೩೬ ಕನ್ನಡಿಗರ ಜನ್ಮಸಾರ್ಥಕತೆ | ೦-೩-೦ |
| ೩೭ ಇಸೋಫನ ಚರಿತ್ರೆ | ೦-೩-೦ |

ಶ್ರೀಸ್ವಾಮಿ ರಾಮಕೃಷ್ಣ ಪರಮಹಂಸರ

# ಸತ್ಕಥಾ-ಕುಸುಮ-ಮಂಜರಿ.

( ಚತುರ್ಥಗುಚ್ಛ )



ಇದನ್ನು

ಕರ್ನಾಟಕ ಪಿತ್ರೈಷಿಣೀ ಗ್ರಂಥಮಾಲೆಯ ಸಂಪಾದಕರಾದ

**ನಾರಾಯಣ ವೆಂಕಟೇಶ ಕುರಡಿ**

ಇವರು ರಚಿಸಿದರು.

---

ಪ್ರಥಮ ಮುದ್ರಣ.

---

೧೯೨೫.

**Price 0-10-0.** **ಬೆಲೆ ೦-೧೦-೦.**

ಬೆಳಗಾವಿಯೊಳಗೆ ದೇವೇಂದ್ರ ಘಡೆಪ್ಪಾ ಚೌಗುಲೆಯವರು ತಮ್ಮ
ಶ್ರೀಮಹಾವೀರ ಮುದ್ರಣಾಲಯದಲ್ಲಿ ಮುದ್ರಿಸಿದರು.

ಮತ್ತು

ವಾಗ್ಭೂಷಣದ ವ್ಯವಸ್ಥಾಪಕರಾದ ಶ್ರೀ. ಕೆ. ಜ. ಅಂಕಲಗಿಯವರು
ಧಾರವಾಡದೊಳಗೆ ಶ್ರೀಚಾಮರಾಜಮಂದಿರದಲ್ಲಿ ಪ್ರಕಟಿಸಿದರು.

ಕರ್ಣಾಟಕ ದೇಶಭಾಷಾ ಸೇವಕರೊಳಗೆ ಅಗ್ರಗಣ್ಯರೂ
ರಮಾಮಾಧವ, ಪದ್ಮಾವತಿ, ಸುಭದ್ರಾಹರಣ, ಸುಭದ್ರಾವಿಜಯ,
ಕುಂದಮಾಲೆ ಮುಂತಾದ ಗ್ರಂಥಕರ್ತರೂ ಆದ



ಶ್ರೀ॥ ಬಿ. ರಾಮರಾವ್, ಎಂ. ಎ., ಎಲೆಲ್. ಬಿ. ಅವರು

ಫೀನಿಕ್ಸ್ ಪ್ರೆಸ್, ಬೆಂಗಳೂರು.

ಕರ್ಣಾಟಕ-ದೇಶಭಾಷಾಭಿಮಾನಿಗಳಲ್ಲಿ

ಅಗ್ರಗಣ್ಯರಾದ

# ಶ್ರೀ. ಬಿ. ರಾಮರಾವ್

**ಎಮ್. ಎ. ಎಲ್ ಎಲ್. ಬಿ.**

ಅವರ ಪದತಲದಲ್ಲಿ

ಬೆಳಗಾವಿಯಲ್ಲಿ ಕೂಡಿದ

ಕರ್ಣಾಟಕ ಸಾಹಿತ್ಯಪರಿಷತ್ತಿನ ಹನ್ನೊಂದನೆಯ

ಸಮ್ಮೇಲನದಲ್ಲಿ ಅಗ್ರಾಸನವನ್ನು

ಅಲಂಕರಿಸಿದ

**ಕುರುಹೆಂದು,**

ಅಲ್ಪಜ್ಞನಾದ ನನ್ನ ಈ ಅಲ್ಪ ಕೃತಿಯನ್ನು

ಪರಮಾದರ ಭಕ್ತಿಯುಕ್ತನಾಗಿ

ಅರ್ಪಿಸಿದೆನು.

ಗ್ರಂಥಕರ್ತ.

**೧೯೨೫.**

# ಪ್ರಕಾಶಕರ ಮುನ್ನುಡಿ.



ಕೇವಲ ಭಾಷಾಸೇವೆಯೇ ಧ್ಯೇಯವಾಗಿರುವ ವಾಗ್ಭೂಷಣ ಪತ್ರಿಕೆಯು ಈಗ ಕೆಲವು ವರುಷಗಳಿಂದಲೂ ನಿಂತು ಹೋಗಿದ್ದು ಈ ವರ್ಷ ಪುನಃ ಅದನ್ನು ಆರಂಭಿಸಲು ಕರ್ನಾಟಕ ವಿದ್ಯಾವರ್ಧಕ ಸಂಘವು ಪ್ರಯತ್ನಿಸಿತು. ಉಳಿದ ನಿಯತಕಾಲಿಕಗಳಂತೆ ತಾತ್ಕಾಲಿಕ ವಿಷಯಗಳನ್ನೂ ಸಾಹಿತ್ಯದ ಅಭಿವೃದ್ಧಿಗೆ ಆವಶ್ಯಕವೆನಿಸುವ ಇತರ ವಿಷಯಗಳನ್ನೂ ಪ್ರಕಟಿಸುವದಲ್ಲದೆ ಪ್ರತಿವರ್ಷ ಒಂದೆರಡು ಮೇಲ್ತರಗತಿಯ ಗ್ರಂಥಗಳನ್ನು ಪ್ರಕಟಿಸಿ ನಿತ್ಯಸಾಹಿತ್ಯ ( Permanent literature )ದ ಉತ್ಕರ್ಷವನ್ನು ಯಥಾಶಕ್ತಿ ಸಾಧಿಸಬೇಕೆಂಬದು ವಾಗ್ಭೂಷಣದ ಧ್ಯೇಯವಾಗಿರುವದು. ಈ ಉದ್ದೇಶಾನುಗುಣವಾಗಿ ಈ ವರ್ಷ ಶ್ರೀ. ಕುರಡಿಯವರ ಈ ಚಿಕ್ಕ ಗ್ರಂಥವನ್ನೂ ಹಿಂದಿನಿಂದ ನಡೆದು ಬಂದ ರಘುವಂಶ ಕಾವ್ಯದ ಕರ್ನಾಟಕ ಪದ್ಯಾನುವಾದವನ್ನೂ ಪ್ರಕಟಿಸಿದೆವು.

ಶ್ರೀ. ಕುರಡಿಯವರ ಲೇಖನವ್ಯವಸಾಯದ ವಿಷಯವಾಗಿ ನಾವು ಕರ್ನಾಟಕ ಬಂಧುಗಳಿಗೆ ಹೆಚ್ಚಿಗೆ ಏನೂ ಹೇಳಬೇಕಾಗಿಲ್ಲ. ತಮಗೆ ಒಪ್ಪಿಸಿರುವ ಪ್ರಸ್ತುತ ಗ್ರಂಥದ ಗುಣದೋಷಗಳನ್ನಂತೂ ತಾವೇ ಸಹಜವಾಗಿ ಕಂಡುಕೊಳ್ಳುವಂತಿದೆ. ಗ್ರಂಥದ ಬಾಹ್ಯಾಂಗವು ಚಿತ್ರಮುದ್ರಣಾದಿಗಳಿಂದ ಮೋಹಕವಾಗುವಂತೆ ಸಾಧ್ಯವಿದ್ದಷ್ಟು ಯತ್ನಿಸಿರುವೆವು. ಭಗವಾನ್ ರಾಮಕೃಷ್ಣ ಪರಮಹಂಸರು, ಅವರ ಧರ್ಮಪತ್ನಿಯವರಾದ ಶ್ರೀಮತೀ ಸರಸ್ವತೀದೇವಿಯವರು ಇವರ ಸುಂದರವಾದ ಚಿತ್ರಗಳನ್ನೂ ಶ್ರೀ. ಬೆನಗಲ್ ರಾಮರಾಯರ ಭಾವಚಿತ್ರವನ್ನೂ ಗ್ರಂಥಮಧ್ಯದಲ್ಲಿ ಸೇರಿಸಿರುವೆವು. ಇಲ್ಲಿ ಹೇಳಬೇಕಾದ ಇನ್ನೊಂದು ಹೆಚ್ಚಿನ ಸಂಗತಿಯೇನೆಂದರೆ, ಇದರೊಳಗಿನ ಪ್ರತಿಯೊಂದು ಕತೆಯ ಸಾರರೂಪವಾದ ಪದ್ಯವನ್ನು ಆಯಾಕತೆಯ ಕೊನೆಯಲ್ಲಿ ಕೊಟ್ಟಿದ್ದರೂ ಅವು ಉಚ್ಚ ವಿಚಾರ ಪರಿಪ್ಲುತವಾಗಿದ್ದು ಚಿಕ್ಕ ಬಾಲಕ-ಬಾಲಿಕೆಯರು ಪಾಠಮಾಡಲು ತಕ್ಕವಾಗಿರುವದರಿಂದಲೂ ಹೆಣ್ಣುಮಕ್ಕಳು ಹಾಡಲು ಯೋಗ್ಯವಾದ "ಸಾಂಗತ್ಯ" ದಲ್ಲಿರುವದರಿಂದಲೂ ಅವೆಲ್ಲವುಗಳನ್ನು ಒಂದೆಡೆಯಲ್ಲಿ ಸಂಗ್ರಹಿಸುವದು ಆವಶ್ಯಕವೆಂದು ಕೆಲವರು ಅಭಿಪ್ರಾಯಪಟ್ಟರು. ಆದುದರಿಂದ ಗ್ರಂಥಾರಂಭದಲ್ಲಿ ವಿಷಯಾನುಕ್ರಮಣಿಕೆಯಲ್ಲಿ ಅವುಗಳನ್ನು ಕೊಟ್ಟಿರುವೆವು. ಆ ಪದ್ಯಗಳು ಎಷ್ಟು ಸರಳವಾದ ಶೈಲಿಯಲ್ಲಿ ಲಲಿತವಾಗಿವೆಯೆಂಬದನ್ನು ವಾಚಕರು ಸಹಜವಾಗಿ ಊಹಿಸುವಂತಿದೆ.

ಕೊನೆಗೆ ಈ ತಮ್ಮ ಕೃತಿಯನ್ನು ವಾಗ್ಭೂಷಣದಲ್ಲಿ ಪ್ರಕಟಿಸಲು ಸಮ್ಮತಿಸಿದುದಕ್ಕಾಗಿ ಶ್ರೀ. ಕುರಡಿಯವರ ಉಪಕಾರವೆಣಿಸಿ, ಪ್ರಸ್ತುತ ಗ್ರಂಥವನ್ನೂ ಈ ವರ್ಷದ ವಾಗ್ಭೂಷಣವನ್ನೂ ಸುಂದರವಾಗಿ ಸಕಾಲದಲ್ಲಿ ಮುದ್ರಿಸಿ ಕೊಟ್ಟಿದ್ದಕ್ಕಾಗಿ ಶ್ರೀಮಹಾವೀರ ಮುದ್ರಣಾಲಯದ ಒಡೆಯರಾದ ಶ್ರೀ. ಡಿ. ಪಿ. ಚೌಗುಲೆಯವರ ಅಭಾರಮನ್ನಿಸಿ ಈ ಲೇಖನವನ್ನು ಮುಗಿಸುವೆವು.

ಶ್ರೀಚಾಮರಾಜಮಂದಿರ
ಧಾರವಾಡ; ೧೯೨೯.

ಕೆ. ಬಿ. ಅಂಕಲಗಿ.

# ವಿಷಯಾನುಕ್ರಮಣಿಕೆ.

( ಸಾಂಗತ್ಯ ).

೧೨. ಇಬ್ಬರು ಗುರುಗಳು.

ಧನಕನಕದೊಡವೆಗಳು ಮನೆಮಾರು ಸತಿಸುತರು ।
ಮನವನಾಕ್ರಮಿಸಿರಲು ನರನೆ ॥
ನಿನಗೆಂತು ದೊರೆವುದಾ ಘನಶಾಂತಿಸೌಖ್ಯವು ।
ಮನದೆ ನೀನೆಡೆಗೊಡವದಿರವಕೆ ॥ ೭ ॥

೧೪. ಹದ್ದು ಕಾಗೆಗಳ ಜಾಣತನ.

ಹದ್ದು ಕಾಗೆಗಳು ತಿಪ್ಪೆಯನುಂಡು ಬೆಳೆವಂತೆ ।
ಬುದ್ಧಿಗೇಡಿಗಳು ಪರಧನವ ॥
ಮುದ್ದುಮಾಟಗಳಿಂದ ಕಪಟ ಕೃತ್ರಿಮದಿಂದ ।
ಕದ್ದು ಬಾಳುವರೈ ಜಗದೊಳಗೆ ॥ ೮ ॥

೧೭. ಶ್ರೀಶಾರದಾ ದೇವಿಯುವರು.

ಪತಿದೇವತೆಯ ಧರ್ಮಮಾರ್ಗದೊಳನುಕೂಲೆ ।
ಪತಿಯಾಚರಿಪ ಕರ್ಮದಾಸಿ ॥
ಪತಿಯಿಷ್ಟ ಸಾಧನೆಯೊಳಿಷ್ಟ ದೇವತೆ ಸತಿಯು ।
ಮತಿವಂತರರಿಯುವದಿವನು ॥ ೯ ॥

೨೧. ರಾಣಿ ರಾಸಮಣಿ.

ಉಡುತೊಡುಗೆ ಹಣಕಾಸು ಸಂಸಾರದಭಿಮಾನ ।
ವಡಿಗಡಿಗೆ ನರರ ಬಾಧಿಸಲು ॥
ಕಡುನಿಷ್ಠ ಹರಿಭಕ್ತರಂತರಂಗವ ಸೇರಿ ।
ಕೊಡುವರೈ ಭಕ್ತಿಭಾವನೆಯ ॥ ೧೦ ॥

೨೨. ದೇವಿಯ ಆರಾಧನೆ.

ಕಷ್ಟ ತಾಪತ್ರಯದ ಭ್ರಷ್ಟಸಂಸಾರದ ।
ಕಷ್ಟವನು ಕಳೆಯಲ್ಕೆ ನರನೆ ॥
ದುಷ್ಟ ಲಜ್ಜಾಭಯ ಮಾನಾಭಿಮಾನಾದಿ ।
ಅಷ್ಟ ಪಾಶವ ಹರಿದೊಗೆಯೈ ॥ ೧೧ ॥

೨೪. ಸ್ನಾನ ಮಾಡುತ್ತಿರುವ ಹೆಂಗಸರು.

ಹಿರಿಯರುಪದೇಶಿಸುವ ಗೂಢವಾದಾ ಜ್ಞಾನ ।
ವರಿತುಕೊಳ್ಳಲು ಸಾಧ್ಯವಿರಲು ॥
ಅರಿತುಕೊಳ್ಳುವುದಂತೆ ಸಾಧ್ಯವಾಗಿರದಿರಲು ।
ಶಿರಬಾಗಿ ನಡೆಯುವದವರ್ಗೆ ॥ ೧೨ ॥

೨೫. ಆಚಾರ ಶೀಲನಾದ ಮಧುಸೂದನನು.

ಜನುಮ ಮಾತ್ರದೆ ಹೊಲೆಯನಾದರೇನಾಯ್ತಯ್ಯ ।
ಜನುಮವಾತನ ಕೈಯೊಳಿಹುದೆ? ॥
ಘನಮಹಿಮ ಹರಿಯ ಸಂಸ್ಮರಣಮಾತ್ರದೊಳವನು ।
ವಿನುತಾತ್ಮನೆನಿಪನೈ ಮರುಳೆ ॥ ೧೩ ॥

೨೮. ಶಿವಾಲಯದ ಪೂಜಾರಿಯು.

ಸತಿಸುತರ ಸಂಸಾರಬಂಧನದೆ ಸಿಲುಕದಾ ।
ಯತಿವರಗೆ ಕ್ಷಿತಿಪಾಲನೆಣೆಯೆ ॥
ಮತಿಹೀನನಾಗಿ ಸಂಸಾರದಲ್ಲುರುಳ್ಕೆ ।
ಅತಿದೀನನೆನಿಪನ್ನೈ—ಅವನು ॥ ೧೪ ॥

೨೦. ಕೋಮಟಿಗನೂ ಅವನ ಪುರೋಹಿತನೂ.

ದಾನಕ್ಕೆ ಕೊಡಲಿಲ್ಲ ದಂಡಕ್ಕೆ ಬಿಡಲಿಲ್ಲ ।
ಜ್ಞಾನವಿಲ್ಲದರ ಸಿರಿಯಂತೆ ॥
ಜ್ಞಾನಿಗಳ ಧನಕನಕವಾಗುವುದೆ ಜಗದೊಳಗೆ ।
ದಾನಧರ್ಮದ ಸುಗತಿಯದಕೆ ॥ ೧೫ ॥

೨೨. ಪ್ರತಸ್ಥನಾದ ಬ್ರಾಹ್ಮಣನು.

ಆಪನ್ನಿವಾರಕ ಹರಿಯ ಸಂಸ್ಮರಣೆಯಿಂ ।
ದಾಪನ್ನಿವಾರಣೆವಡೆದು ॥
ತಾಪತ್ರಯಂಗಳೊಳುರುಳುವ ಮಾನವರ ।
ಪಾಪ ಪರಿಹಾರವೆಂತಹುದೈ ॥ ೧೬ ॥

೨೪. ಚಾಣಾಕ್ಷನಾದ ಅರ್ಜುನನು.

ಸುವಿಚಾರ ಸತ್ಕರ್ಮನಿರತರಿಗೆ ಕೇಡುಂಟೇ ।
ಭವಭಯರಹಿತನ ದಯದೆ ॥
ಅವಿವೇಕ ಮರೆಮೋಸ ವಂಚನೆಗೆ ಜಯವುಂಟೆ ।
ರವಿಯ ಕತ್ತಲೆಯಂಜಿಸುವುದೆ ॥ ೧೭ ॥

೩೮. ವಿವೇಕಿಗಳ ಮನಸ್ಸು.

ವೈರಿಗಳರುವರ ಜಯಿಸಿದ ಮಹಿಮರಿಗೆ ।
ವೈರಿಗಳಿರುವರೆ ಜಗದೆ ॥
ವೈರವನೆ ಸಾಧಿಸಲು ಜನಿಸಿದಗೆ ದ್ರೋಣನು ॥
ತೋರಿದನೆ ವೈರಮತ್ಸರವ ॥ ೧೮ ॥

೪೦ ಮೀನುಮಾರುವ ಬೆಸ್ತರವಳು.

ಸುಗುಣ ದುರ್ಗುಣಗಳು ಸಂಸರ್ಗ ಮೂಲದೊ ।
ಳೊಗೆದು ನೆಲೆಗೊಂಡು ಬೆಳೆಯುವವು ॥
ಮಗಮಗಿಪ ಕುಸುಮಗಂಧವು ಬೆಸ್ತರವಳಿಗೆ ।
ಸೊಗಸುವುದೆ ಮೀನವನ್ನುಳಿದು ॥ ೧೯ ॥

೪೧. ಜಾತಿಭೇದದ ತೊಡಕು.

ಪರಿಪಕ್ವವಾದ ಸುಜ್ಞಾನಿಗೆ ಜಗದೊಳ ।
ಗಿರಲಾರದಾಚಾರವೆಂದು ॥
ತುರುಕುವರೆ ಕಡುಬ ನೀರಿಳಿಯದ ಗಂಟಲೊಳು ।
ಹರಿದೊಗೆದಾಚಾರವಿಧಿಯ ॥ ೨೦ ॥

೪೨. ಇಬ್ಬರು ಅಣ್ಣತಮ್ಮಂದಿರು.

ಹದಿನಾಲ್ಕು ಲೋಕಗಳನಾಳುವಾ ಸರ್ವಜ್ಞ ।
ಸದಯ ಶ್ರೀಹರಿಗಗೋಚರವೆ ॥
ಇದು ಧರ್ಮವಿದಧರ್ಮವೆಂಬುದು ಮೂಢನೆ ।
ಸದಮಲ ಚಿತ್ತವನೆ ಪಡೆಯೈ ॥ ೨೦ ॥

೪೩. ಶ್ರೀರಾಮಚಂದ್ರನ ವೈರಾಗ್ಯ.

ಸಂಸಾರ ತಾಪತ್ರಯಂಗಳಿಗಂಜುತ ।
ಸಂಸಾರ ತ್ಯಾಗಿಯಾಗುವಗೆ ॥
ಸಂಸಾರಬಂಧನವು ಬಿಡಲಾರದದರೊಳಿ ।
ಕಂಸಾರಿಯನು ಕಾಣಬಹುದು ॥ ೨೧ ॥

೪೪. ಭಗವಂತನ ರೂಪಗುಣಗಳು.

ಬಹುರೂಪ ಬಹುಗುಣಯುತನಾಗಿ ಗುಣರೂಪ ।
ರಹಿತನೆಂದೆನಿಪನೈ ಹರಿಯು ॥
ಅಹಿತವನ್ನೆಣಿಸಿ ವಾದಿಸದಿರು ಗುಣರೂಪ ।
ರಹಿತನ ಭಕ್ತವರ್ಗದೊಳು ॥ ೨೨ ॥

೪೫. ಅನುಕರಣ.

ಗುಣಿಗಳನನುಕರಿಸೆ ಗುಣವಂತರಾಗುವರು ।
ಗುಣಹೀನರನುಕರಣದಿಂದ ॥
ಗುಣಹೀನರೆನಿಸುವರದರಿಂದ ಸುಗುಣಿಗಳ ।
ನನುಕರಿಸಿ ನಡೆಯುವದು ನಿರುತ ॥ ೨೩ ॥

೪೬. ಪೂಜಾರಿಯ ಭಕ್ತಿಪರೀಕ್ಷೆ.

ತಪ್ಪುತಡೆಗಳನ್ನೆಲ್ಲ ವೊಪ್ಪಿಕೊಳ್ಳುವ ಜಗದ ।
ಬೊಪ್ಪ ಶ್ರೀಹರಿಯೊಳು ತನ್ನ ॥
ತಪ್ಪೊಪ್ಪುಗಳನ್ನೆಲ್ಲ ಭಕ್ತಿಯೊಳರ್ಪಿಸೆ ।
ತಪ್ಪದಲೆ ಕ್ಷಮಿಸಿ ರಕ್ಷಿಪನು ॥ ೨೪ ॥

೪೭. ಅಹಂಕಾರಿಯಾದ ಸಾಹುಕಾರನು.

ಮಿನುಗುವ ಮೀಂಬುಳವು ತನ್ನಲ್ಪ ಗುಣಮುದದೆ ।
ಅನುಪಮದ ರವಿಯ ಮರೆವಂತೆ ॥
ಧನವಂತರಾದವರು ತಮ್ಮಲ್ಪ ಧನಮುದದೆ ।
ಘನಮಹಿಮನನೆ ಮರೆವರಲ್ತೆ ॥ ೨೫ ॥

೪೮. ಬ್ರಾಹ್ಮಣನೂ ಅವನ ಶಿಷ್ಯನೂ.

ಮನವನಾವರಿಸಿರುವ ಮಾಯೆಯ ರೂಪವ ।
ಘನಸಾಧನೆಯೊಳರಿಯಲ್ಕೆ ॥
ಮನವ ಬಿಟ್ಟೋಡುವದದು ಕದ್ದಕಳ್ಳನು ।
ಮನೆಯವರ ಕಂಡೋಡುವಂತೆ ॥ ೨೬ ॥

೫೮. ಮಾಯೆಯ ಸ್ವರೂಪ.

ಹುಲಿಯ ಮುಖದವರ ಕಂಡಂಜುವ ಮಗುವಿಗೆ ।
ಹುಲಿಯಲ್ಲವೆಂಬುದು ತಿಳಿಯೆ ॥
ಹುಲಿಯ ಭೀತಿಯು ಹರಿವಂತೆ ಮಾಯೆಯ ಭೀತಿ ।
ಕಳೆಯುವದದನು ನೀಂ ತಿಳಿಯೆ ॥ ೨೮ ॥

೫೭. ಸಣ್ಣ ಮನಸ್ಸು.

ತಾನೆ ಸುಂದರಿ ತಾನೆ ಸಂಪನ್ನನೆಂದೆಂಬ ।
ತಾನೆ ಸರ್ವರೊಳಧಿಕನೆಂಬ ॥
ಜ್ಞಾನಹೀನರ ಹೀನಭಾವನೆಯನೊಪ್ಪುವರೆ ।
ಜ್ಞಾನಿಗಳಾದ ಸಜ್ಜನರು ॥ ೨೯ ॥

೬೨. ಏಳು ಕೊಪ್ಪರಿಗೆಗಳು.

ಏಳು ಕೊಪ್ಪರಿಗೆ ದ್ರವ್ಯವ ಪಡೆದ ನಾವಲಿಗ ।
ನೆಳ್ಳಷ್ಟು ಸುಖವ ಹೊಂದಿದನೆ ॥
ಕಳ್ಳನಂದದೆ ಮನದೆ ಸೇರಿರುವ ಲೋಭವ ।
ಗೆಲ್ಲುವುದೆ ಸುಖಕೆ ಸಾಧನವೈ ॥ ೩೦ ॥

೬೪. ಮಾರವಾಡಿಯ ಮನಸ್ಸು.

ಹೊರಗಿನಾಚಾರದೆ ಸನ್ಯಾಸಿಯಾದವಗೆ ।
ಪರಮ ಪುರುಷನೊಲಿದಪನೆ ॥
ನಿರಭಿಮಾನದೆ ಸರ್ವಸಂಗವ ತೊರೆದು ನೀಂ ।
ಗುರುಪುಂಗವನ ಸಾರುಮರುಳೆ ॥ ೩೧ ॥

೬೫. ಪ್ರಾಪಂಚಿಕ ಸಂಬಂಧಗಳು.

ಹಿಂದೆ ಮಾಡಿದ ಹಿತಾಹಿತ ಕರ್ಮ ಫಲಭೋಗ ।
ಕಿಂದು ಸತಿಸುತರೆಂದು ಜನಿಸಿ ॥
ಸಂದಿರುವರ್ಕೆಯ ನೀನವರೊಳು ಕೂಡದೆ ।
ಹಿಂದು ಮುಂದರಿತು ನಡೆಯುವದು ॥ ೩೧ ॥

೭೯. ನ್ಯಾಯ ಪ್ರಿಯತೆ.

ಶಂಖಲಿಖಿತರ ನ್ಯಾಯನಿಷ್ಠುರತೆಯಂದದೊಳು ।
ಸಂಕಟಂಗಳಿಗಂಜದಿಹುದು ॥
ಶಂಖಚಕ್ರಧಾರಿ ಸಕಲಜಗದಾಧಾರಿ ।
ಸಂಕಟಂಗಳ ನೀಗಿ ಪೊರೆವಂ ॥ ೩೩ ॥

೩೧. ಪೂರ್ವ ಸಂಚಿತ.

ಹಿಂದೆ ಗಳಿಸಿದ ದ್ರವ್ಯಸಂಚಯವನೊಂದೊಂದೆ ।
ಯಿಂದು ನೀನುಪಭೋಗಿಪಂತೆ ॥
ಹಿಂದೆ ಮಾಡಿದ ಕರ್ಮಸಂಚಯದ ಪ್ರತಿಫಲವ ।
ನಿಂದು ನೀನುಪಭೋಗಿಸುವದು ॥ ೩೪ ॥

೭೩. ನಿಜವಾದ ಬ್ರಾಹ್ಮಣನು.

ಸತ್ಯವೇ ಸತ್ಕುಲದ ಲಕ್ಷಣವು ಲೋಕದೊಳ್ ।
ಸತ್ಯವೇ ಸುದ್ವಿಜರ ಗುಣವು ॥
ಸತ್ಯವಸ್ತುಜ್ಞಾನ ಸದ್ಬ್ರಹ್ಮ ವಿದ್ಯೆಯು ।
ಸತ್ಯಕಾಮರ ವಶವಹುದು ॥ ೩೫ ॥

೭೮. ಭಿಕ್ಷಕನಲ್ಲಿ ಭಿಕ್ಷೆ.

ಹರಿಯಿತ್ತ ಮರಕತವ ಮಳಲರಾಶಿಯೊಳಿಟ್ಟ ।
ಹರಿ ಬಳುತನನು ಬೇಡ ಬಂದು ॥
ಮರುಳುತನದೆ ಮತ್ತಾಮರಕತವ ಪಡೆಯುವರೆ ।
ಸ್ಥಿರಸುಖದ ದಾರಿಯನು ಮರೆತು ॥ ೩೬ ॥

೮೦. ವಿಧವೆಗೆ ಪತಿ ಯು ದೊರೆತನು.

ಸತ್ತವರಿಗತ್ತರೆ ಅತ್ತವರು ಸಾಯರೇ? ।
ಸತ್ತವೋಲತ್ತರೇನಹುದು ॥
ಚಿತ್ತದೊಳಿರುವ ಶ್ರೀ ಚಿನುಮಯನೆ ಪಾಲಕನು ।
ಸತ್ತರೂ ಬದುಕಿದರೂ ನಮಗೆ ॥ ೩೭ ॥

೮೧. ಅರಸನೂ ಸನ್ನ್ಯಾಸಿಯೂ.

ಕಾಡಿನ ಗಿಡಮರಗಳೊಡನಾಡಿ ಶ್ರೀಹರಿಯ ।
ಪಾಡಿನಲಿವ ಜ್ಞಾನಿಗಳಿಗೆ ॥
ನಾಡಿನೊಡೆಯನೀವ ಬಿರುದಿನ ಬಳಿಗಳು ।
ಕಾಡುಗಲ್ ಹರಳಿಗೆ ಕಡೆಯ್ಯೆ ॥ ೩೮ ॥

೮೪. ದೇವರು ಗುಡಿ ಯಲ್ಲಿ ಅಡಗಿ ರುವನೇ?

ಧರೆಯನಾಳುವ ಪರಾತ್ಪರವಸ್ತು ಗುಡಿಯೊಳು ।
ವರಶಿಲೆಯ ಮೂರ್ತಿಯಲಿ ನೆಲಸೆ ॥
ಧರೆಯ ಕೋಟ್ಯನು ಕೋಟಿಜೀವಜಂತುಗಳನ್ನು ।
ಪೊರೆವ ಭಾರವನಾರುವಹಿಪರ್ ॥ ೩೯ ॥

೮೭. ಭಕ್ತಿ.

ಹರಿಯೆ ನಿನ್ನೊಳು ಭಕ್ತಿಮುಕ್ತಿಗೆ ।
ಸರಳ ಮಾರ್ಗವದೆಂಬುದರಿಯದೆ ।
ತಿರುತಿರುಗಿ ಮಾಯಾಪ್ರಪಂಚದಿ ಸುತ್ತಿಬೇಸತ್ತೆ ॥
ಪರಮ ಭಕ್ತಿಯೊಳೀಗ ನಿನ್ನಯ ।
ಚರಣತಲದಲಿ ಬಿದ್ದು ಬೇಡುವೆ ।
ಪರಿಹರಿಸೊ ನರಜನ್ಮವನು ಕೊಂಡೀ
ಸುಮಾಂಜಲಿಯ ॥ ೪೦ ॥

---

# ನಿವೇದನೆ.



“ ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ”
ಎಂದು ಅಪ್ಪಣೆ ಕೊಡಿಸಿದ ಭಗವಾನ್ ಶ್ರೀಕೃಷ್ಣನ ಉಕ್ತಿಗನುಸಾರವಾಗಿ ನೋಡಿದರೆ ಶ್ರೀರಾಮಕೃಷ್ಣಪರಮಹಂಸರು ಕೇವಲ ಭಗವಂತನ ಅವತಾರವೇ ಎಂದೂ ಧರ್ಮ ಸಂಸ್ಥಾಪನೆಯೇ ಅವರ ಜೀವಿತದ ಧ್ಯೇಯವಾಗಿತ್ತೆಂದೂ ಹೇಳಬೇಕಾಗುವದು. ಆ ಮಹಾತ್ಮರ ಜೀವನಚರಿತೆಯ ಕೆಲವು ಮುಖ್ಯಾಂಶಗಳನ್ನು ಸತ್ಕಥಾಕುಸುಮಮಂಜರಿಯ ಪ್ರಥಮಭಾಗದಲ್ಲಿ ನಿವೇದಿಸಿರುವೆವು. ಆ ಮಹಾಮಹಿಮರ ಚರಿತ್ರೆಯನ್ನು ಬೋಧಿಸಿ ಅವರ ಉಪದೇಶಾಮೃತವನ್ನು ಎರೆದು ಪೋಷಿಸಿ ಸಾಲಿಸುತ್ತಿರುವಂಥ ಅನೇಕ ಗ್ರಂಥಗಳನ್ನು ಓದಿದುದರಿಂದ ಉಂಟಾದ ಆನಂದದಲ್ಲಿ ಅಲ್ಪವನ್ನಾದರೂ ಕರ್ನಾಟಕ ಬಂಧುಗಳ ಮುಂದಿರಿಸಬೇಕೆಂಬ ಕೋರಿಕೆಯೊಂದು ನಮ್ಮ ಮನಸ್ಸಿನಲ್ಲಿ ಬಹುದಿನಗಳಿಂದಲೂ ಇದ್ದಿತು. ದಯಾಮಯನಾದ ಶ್ರೀಹರಿಯ ಪ್ರೇರಣೆಯಿಂದ ನಮ್ಮ ಈ ಮನೋಭಾವನೆಯು ಎರಡು ವರುಷಗಳ ಹಿಂದೆ ಮೂರ್ತಸ್ವರೂಪಕ್ಕೆ ಬಂದಿತು. ಸತ್ಕಥಾಕುಸುಮಮಂಜರಿಯ ನಾಲ್ಕು ಭಾಗಗಳನ್ನು ಬರೆದು, ಮುದ್ರಿಸುವ ಕೆಲಸವೂ ಆರಂಭವಾಯಿತು. ಮೊದಲನೆಯ ಭಾಗವು ಉತ್ತರಕನ್ನಡದಲ್ಲಿ ಹೊರಡುತ್ತಿದ್ದ “ ಸಾಧನ ” ಎಂಬ ಮಾಸಪತ್ರಿಕೆಯಲ್ಲಿ ಪ್ರಕಟವಾಯಿತು. ಕನ್ನಡ ಪತ್ರಿಕೆಗಳಿಗೆ ಸ್ವಾಭಾವಿಕವಾದ ಮಕ್ಕಳ ಬೇನೆಯಿಂದ ಸಾಧನವು ಬಾಲ್ಯದಲ್ಲಿಯೇ ಮೃತ್ಯುವಿಗೀಡಾಗಲು ಮತ್ತೆರಡು ಭಾಗಗಳನ್ನು ಸ್ವತಂತ್ರವಾಗಿ ಮುದ್ರಿಸಿ ಪ್ರಕಟಿಸಬೇಕಾಯಿತು. ಇದು ನಾಲ್ಕನೆಯ ಭಾಗವು. ಇದರೊಳಗಿನ ೪೦ ಚಿಕ್ಕ ಕತೆಗಳಲ್ಲಿ ಕೊನೆಯ ಕೆಲವು ಹೊರತಾಗಿ ಮಿಕ್ಕವೆಲ್ಲಾ ಶ್ರೀರಾಮಕೃಷ್ಣಪರಮಹಂಸರ ಉಪದೇಶಾಮೃತದೊಳಗಿಂದಲೇ ಆಯ್ದುಕೊಂಡವುಗಳಾಗಿವೆ.

ಪರಮ ಪೂಜ್ಯರೆನಿಸುವ ಭಗವಾನ್ ಶ್ರೀರಾಮಕೃಷ್ಣಪರಮಹಂಸರ ಜನ್ಮಭೂಮಿಯು ವಂಗದೇಶವು; ಆದುದರಿಂದ ಆ ವಂಗಭಾಷೆಯಲ್ಲಿ ಅವರ ಉಪದೇಶಾಮೃತಗಳಿಗೂ ಜೀವನಚರಿತೆಗೂ ಸಂಬಂಧಿಸಿದ ಅನೇಕಾನೇಕ ಗ್ರಂಥಗಳು ಪ್ರಕಟವಾಗಿರುವವು; ಇನ್ನೂ ಪ್ರಕಟವಾಗುತ್ತಲೂ ಇವೆ. ಮತ್ತೆ ಕೆಲವು ಆಂಗ್ಲಭಾಷೆಗೂ ಇನ್ನನೇಕ ದೇಶಭಾಷೆಗಳಿಗೂ ಪರಿವರ್ತಿತವಾಗಿವೆ. ಕನ್ನಡದಲ್ಲಿಯೂ ಈ ವಿಷಯದ ಮೇಲೆ ಬೆಂಗಳೂರಿನ ಶ್ರೀರಾಮಕೃಷ್ಣಾಶ್ರಮ ಗ್ರಂಥಮಾಲೆಯಲ್ಲಿ ಒಂದೆರಡು ಗ್ರಂಥಗಳು ಪ್ರಕಟವಾಗಿವೆ. ಶ್ರೀಸ್ವಾಮಿಯವರ ಜೀವನಚರಿತೆಯ ಮತ್ತು ಅವರ ಉಪದೇಶಾಮೃತದ ವಿಷಯವಾಗಿ ಹೆಚ್ಚು ತಿಳಿದುಕೊಳ್ಳಲಿಚ್ಛಿಸುವವರು ಆ ಗ್ರಂಥಗಳನ್ನು ಪರಿಶೀಲಿಸಬಹುದು.

ಅತ್ಯಂತ ಗೂಢವಾಗಿರುವ ವೇದಾಂತದ ತತ್ವಗಳನ್ನು ವ್ಯಾವಹಾರಿಕ ಉದಾಹರಣೆಗಳಿಂದ ಒಡೆದು ವಿವೇಚಿಸಿ ಸಾಮಾನ್ಯಜನರಿಗೂ ಕೂಡ ಅದರ ರಹಸ್ಯವು ತಿಳಿಯುವಂತೆ ಮಾಡುವದೇ ಇದರೊಳಗಿನ ಕತೆಗಳ ಧ್ಯೇಯವು. ಇಂತಿರುವದರಿಂದ ಇವು ಸಾಮಾನ್ಯರಿಗೆ ಮನರಂಜನೆಯನ್ನುಂಟುಮಾಡುವಂತೆ ವಿಚಾರಶೀಲರಾದವರಿಗೆ ಸರ್ವಸಮ್ಮತವಾದ ವೇದಾಂತದ ರಹಸ್ಯಗಳನ್ನು ಉಪದೇಶಿಸುವವು. ಕ್ರೈಸ್ತರು, ಮಹಮ್ಮದೀಯರು ಮುಂತಾದ ಅನ್ಯ ಧರ್ಮದವರೂ ಕೂಡ ಭಗವಾನ್ ರಾಮಕೃಷ್ಣಪರಮಹಂಸರ ವಚನಗಳನ್ನು ಓದಿದರೆ ಇವುಗಳಲ್ಲಿ ತಮ್ಮ ಧರ್ಮಕ್ಕೆ ವಿರೋಧವಾದ ಯಾವ ಸಂಗತಿಯೂ ಇರುವದಿಲ್ಲ, ಇಷ್ಟೇ ಅಲ್ಲ, ಇವು ಅವರೆಲ್ಲರ ಧರ್ಮಸಮ್ಮತವಾಗಿಯೇ ಇರುವವು, ಎಂಬದನ್ನು ಕಂಡುಕೊಳ್ಳುವಂತಿದೆ. ಭಿನ್ನ ಧರ್ಮೀಯರ ಪರಸ್ಪರ ವಿಷಯಕ ತಪ್ಪು ಕಲ್ಪನೆಗಳನ್ನೆಲ್ಲ ದೂರಮಾಡಿ ಪರಸ್ಪರ ವಿರೋಧವನ್ನು ಕಳೆದುಬಿಡುವದು ಆ ಮಹಾನುಭಾವರ ಧ್ಯೇಯವಾಗಿದ್ದಿತು. ಇದರಲ್ಲಿ ಅಡಕವಾಗಿರುವ ತತ್ವಗಳು ಗೂಢವಾಗಿದ್ದರೂ ಅವುಗಳ ವಿವೇಚನಾಕ್ರಮವೂ ಭಾಷೆಯೂ ಚಿಕ್ಕ ಬಾಲಕರಿಗೂ ಸುಗಮವಾಗಿರಬೇಕೆಂಬದನ್ನು ಸರ್ವದಾ ಲಕ್ಷದಲ್ಲಿಟ್ಟುಕೊಂಡಿರುವೆವು. ಪ್ರತಿಯೊಂದು ಕತೆಯ ಕೊನೆಯಲ್ಲಿರುವ ಕವಿತೆಯು ಆ ಕತೆಯ ರಹಸ್ಯವನ್ನು ಹೇಳುವದು.

ಈ ನಮ್ಮ ಅಲ್ಪಕೃತಿಗೆ ಬಹುಮಾನವನ್ನಿತ್ತ ಧಾರವಾಡದ ಕ. ವಿ. ವ. ಸಂಘದ ಮತ್ತು ವಾಗ್ಭೂಷಣದಲ್ಲಿ ಪ್ರಕಟಿಸಲು ಬಯಸಿದ ಸಂಪಾದಕಮಂಡಲದ ಉಪಕಾರಗಳನ್ನು ಸ್ಮರಿಸುವದು ನಮ್ಮ ಆದ್ಯಕರ್ತವ್ಯವು. ಅದರಂತೆ ಕರ್ನಾಟಕ ದೇಶಭಾಷಾಭಿಮಾನಿಗಳಲ್ಲಿ ಗಣ್ಯರಾದ ಶ್ರೀ. ಬಿ. ರಾಮರಾವ್, ಎಮ್. ಎ. ಎಲ್‌ಎಲ್. ಬಿ. ಅವರಿಗೆ ಅವರ ಭಾಷಾಪ್ರೇಮದ ಮತ್ತು ಬೆಳಗಾವಿಯಲ್ಲಿ ನೆರೆದ ೧೧ನೆಯ ಸಾಹಿತ್ಯಸಮ್ಮೇಲನದ ಅಧ್ಯಕ್ಷಸ್ಥಾನವನ್ನು ಅಲಂಕರಿಸಿದ ಕುರುಹೆಂದು ಈ ಕೃತಿಯನ್ನು ಅರ್ಪಿಸಬೇಕೆಂಬ ಕೋರಿಕೆಯನ್ನು ಪೂರೈಸಿದುದಕ್ಕಾಗಿ ಆ ಮಹನೀಯರ ಉಪಕಾರವೆಣಿಸುವೆವು. ಶ್ರೀಹರಿಯ ಪ್ರೇರಣೆಯಿಂದ ಕನ್ನಡಿಗರು ಪ್ರೋತ್ಸಾಹಿಸಿದರೆ ಇದರ ಮತ್ತೊಂದು ಭಾಗವನ್ನು ಕೆಲವು ದಿನಗಳಲ್ಲಿಯೇ ಮುದ್ರಿಸಬೇಕೆಂದು ಬಯಸುವೆವು. ಕೊನೆಗೆ ಪರಮದಯಾಘನನಾದ ಶ್ರೀಹರಿಯನ್ನು **“ ಪರಿಹರಿಸೊ ನರಜನ್ಮವನು ಕೊಂಡೀ ಸುಮಾಂಜಲಿಯು ”** ಎಂದು ಪ್ರಾರ್ಥಿಸಿ ಈ ಚಿಕ್ಕ ನಿವೇದನೆಯನ್ನು ಮುಗಿಸುವೆವು.

ಶ್ರಾವಣ ಶುದ್ಧ ಪಂಚಮಿ,
ಶಾ. ಶಕೆ ೧೮೪೭.
ಶ್ರೀಸರಸ್ವತೀ ಮಂದಿರಮ್,
ಧಾರವಾಡ.

ಸಾಧುವಿಧೇಯ,

**ನಾರಾಯಣ.**



# ಸತ್ಕಥಾಕುಸುಮಮಂಜರಿ.



## ೧. ಗಜೇಂದ್ರ ನಾರಾಯಣ.






ಶಾಲವಾದೊಂದು ಅಡವಿಯ ನಡುವೆ ಚಿಕ್ಕದೊಂದು ಪರ್ಣಕುಟೀರದಲ್ಲಿ ಒಬ್ಬ ಯತಿವರನು ವಾಸವಾಗಿದ್ದನು. ನೆರೆಯಲ್ಲಿ ಅನೇಕ ಶಿಷ್ಯರು ಚಿಕ್ಕ ಚಿಕ್ಕ ಕುಟೀರಗಳಲ್ಲಿದ್ದುಕೊಂಡು ಗುರುವಿನ ಸೇವೆಯಲ್ಲಿ ನಿಮಗ್ನರಾಗಿದ್ದರು. ಗುರುವು ಯಾವಾಗಲೂ ಭಗವತ್‌ಧ್ಯಾನದಲ್ಲಿ ಆಸಕ್ತನಾಗಿರುವನು. ಪ್ರಪಂಚದ ತಾಪತ್ರಯಗಳಿಂದ ಮುಕ್ತನಾಗಿದ್ದ ಯತಿವರನು ತನಗೆ ಅನುಕೂಲವೆನಿಸಿದಾಗ ತನ್ನ ಶಿಷ್ಯರನ್ನೆಲ್ಲ ಕೂಡಿಸಿ ಅವರಿಗೆ ಧರ್ಮೋಪದೇಶ ಮಾಡುವನು.

ಒಂದು ದಿನ ಪ್ರಾತಃಕಾಲದಲ್ಲಿ ಯತಿವರನು ಪ್ರಾತರ್ವಿಧಿಗಳನ್ನೆಲ್ಲ ತೀರಿಸಿಕೊಂಡು ತನ್ನ ಕುಟೀರದ ಮುಂದಿನ ವಿಶಾಲವಾದ ಅಂಗಳದಲ್ಲಿ ಶಿಷ್ಯರು ಸಿದ್ಧಪಡಿಸಿಟ್ಟ ಆಸನದಲ್ಲಿ ಬಂದು ಕುಳ್ಳಿರಲು ನೂರಾರು ಶಿಷ್ಯರು ಸುತ್ತುವರಿದು ಕುಳಿತರು. ಅವನು ತನ್ನ ಉಪದೇಶವನ್ನು ಆರಂಭಿಸಿ ವೇದವೇದಾಂಗಾದಿಗಳಿಂದ ಉದಾಹರಣೆಗಳನ್ನು ಆಯ್ದು ವಿವರಿಸಿ ಅಣುರೇಣುತೃಣಕಾಷ್ಠಗಳಲ್ಲೆಲ್ಲಾ ಭಗವಂತನು ವಾಸವಾಗಿರುವನೆಂದೂ ಜಗತ್ತಿನ ಮನುಷ್ಯಪಶುಪಕ್ಷಿಕ್ರಿಮಿಕೀಟಕಗಳೇ ಮೊದಲಾದ ಸರ್ವ ಜೀವಜಂತುಗಳೂ ಭಗವಂತನ ಅಂಶಗಳೇ ಸರಿ ಎಂದೂ ಪ್ರತಿಪಾದಿಸಿದನು. ಮತ್ತು ಕೊನೆಗೆ ಪ್ರಿಯ ಶಿಷ್ಯರೇ, ನಾನು ಇಷ್ಟು ಹೊತ್ತಿನವರೆಗೆ ಉಪದೇಶಿಸಿದ ಮಾತುಗಳನ್ನೆಲ್ಲಾ ನೆನಪಿನಲ್ಲಿಟ್ಟು ನಡೆದರೆ ಒಳ್ಳೆಯದು; ಅದಾಗದಿದ್ದರೆ ಇದೊಂದೇ ಮಾತಿನಲ್ಲಿ ಸರ್ವಶಾಸ್ತ್ರಗಳ ಸಾರವೂ ಅಡಕವಾಗಿದೆ. ಇದೊಂದೇ ಮಾತನ್ನು ನೀವು ಸ್ಮರಣೆಯಲ್ಲಿಟ್ಟುಕೊಂಡರೆ ನಿಮ್ಮ ಸರ್ವಕಾರ್ಯಗಳೂ ಸುಖಕರವಾಗಿ ಪರಿಣಮಿಸುವವು.—“ಈ ಲೋಕದೊಳಗಿನ ಸಕಲ ಪ್ರಾಣಿಗಳೂ ಈಶ್ವರಾಂಶಸಂಭೂತಗಳಾಗಿವೆ. ಆದುದರಿಂದ ಅವೆಲ್ಲವುಗಳನ್ನೂ ಸಮದೃಷ್ಟಿಯಿಂದ ನೋಡಿ ಎಲ್ಲ ಪ್ರಾಣಿಗಳನ್ನೂ ತನ್ನ ಸಮಾನವೆಂದೇ ತಿಳಿದು ನಡೆಯಬೇಕು. ಸಕಲಪ್ರಾಣಿಗಳಲ್ಲಿಯೂ ಈಶ್ವರನು ಆತ್ಮಸ್ವರೂಪನಾಗಿ ವಾಸವಾಗಿರುವದರಿಂದ ಅವುಗಳನ್ನೆಲ್ಲ ದೇವರೆಂದೇ ಭಾವಿಸಿ ನಡೆಯತಕ್ಕದ್ದು. ಅಡವಿಯ ಗಿಡಮರಗಳನ್ನು ಮುರಿದು ಮುಕ್ಕುವ ಪರ್ವತಾಕಾರದ ಮದ್ದಾನೆಯನ್ನೂ ಅರಳಿದ ಕುಸುಮಗಳೊಳಗಿನ ಮಧುವನ್ನು ಆಶ್ಚರ್ಯಕರವಾಗುವಂತೆ ಸಂಗ್ರಹಿಸುವ ಜೇನುನೊಣಗಳನ್ನೂ ನೋಡಿದರೆ ಇಂತಹ ಅದ್ಭುತ ಶಕ್ತಿಯುಕ್ತಿಗಳು ಇನ್ನಾರಿಗೆ ಸಾಧ್ಯವೆಂದು ನಮಗೆ ಇಷ್ಟಿಲ್ಲದ ಆಶ್ಚ

ರ್ಯವಾಗುವದಿಲ್ಲವೇ? ಇನ್ನೂ ಅನೇಕ ಉದಾಹರಣೆಗಳಿಂದ ಸೃಷ್ಟಿಯು ಈಶ್ವರನ ಮಾಟದ ಮನೆಯೆಂದು ಸಿದ್ಧಮಾಡಬಹುದು."

ಮುಂದೆ ಕೆಲವು ದಿನಗಳು ಕಳೆದವು. ಶಿಷ್ಯರು ಯತಿವರನ ಸೇವೆಯನ್ನು ಎಂದಿನಂತೆ ನಡಿಸಿದ್ದರು. ಒಂದು ದಿನ ಐದಾರು ಶಿಷ್ಯರು ಒಂದಾಗಿ ಕಟ್ಟಿಗೆಯನ್ನು ತರುವದಕ್ಕೆಂದು ಅಡವಿಗೆ ಹೊರಟರು. ಅವರೆಲ್ಲರೂ ಅಡವಿಯನ್ನು ಸೇರಿ ಒಣಗಿದ ಕಟ್ಟಿಗೆಯನ್ನು ಹುಡುಕುತ್ತ ಅತ್ತಿತ್ತ ಅಡ್ಡಾಡುತ್ತಿರಲು ಆಕಸ್ಮಾತ್ ಹಿಂದಿನಿಂದ ಗದ್ದಲವು ಕೇಳಬಂದಿತು.—"ಓಡಿರಿ, ಓಡಿರಿ, ಮದ್ದಾನೆಯು ಬರುತ್ತಿದೆ, ಮದ್ದಾನೆಯು ಬರುತ್ತಿದೆ" ಎಂದು ಒದರಾಡುತ್ತಿದ್ದ ನೂರಾರು ಬೇಟೆಗಾರರು ಸುತ್ತುಕಡೆಯಿಂದ ಓಡಾಡತೊಡಗಿದರು. ಇದನ್ನು ನೋಡಿ ಯತಿವರನ ಶಿಷ್ಯರು ಗಾಬರಿಯಾದರು. ಅವರಲ್ಲಿ ಒಬ್ಬನು ಮಾತ್ರ ಸುಮ್ಮನೆ ನಿಂತಿದ್ದನು. ಮಿಕ್ಕವರು "ಓಡಿರಿ, ಓಡಿರಿ" ಎಂದು ಒದರುತ್ತ ದಾರಿ ಸಿಕ್ಕಕಡೆಗೆ ಓಡಿ ನಡೆದರು. ಇಷ್ಟರಲ್ಲಿ ಒಂದು ಮದ್ದಾನೆಯು ಇದಿರಿಗೆ ಬಂದಿತು! ಅದರ ಹಿಂದೆಯೇ ಮತ್ತೊಂದು ಆನೆಯು ಮೇಲೆ ಕುಳಿತು ಅದನ್ನು ಹಿಂಬಾಲಿಸುತ್ತಿದ್ದ ಮಾವುತನು "ಓಡಿರಿ, ಓಡಿರಿ, ಮದ್ದಾನೆ ಬಂದಿತು! ಬಂದಿತು! ಓಡಿ ಪಾರಾಗಿರಿ" ಎಂದು ಚೀರಿದನು. ಸುಮ್ಮನೆ ನಿಂತಿದ್ದ ಸನ್ಯಾಶಿಯ ಶಿಷ್ಯನು ಮದ್ದಾನೆಯು ಇದಿರಿಗೆ ಬಂದೊಡನೆ ಅದಕ್ಕೆ "ನಾರಾಯಣ ನಮಸ್ತೇಸ್ತು" ಎಂದು ಸಾಷ್ಟಾಂಗನಮಸ್ಕಾರ ಮಾಡಿದನು. ಗಜೇಂದ್ರನಾರಾಯಣನು ತನ್ನ ಹಾದಿಯಲ್ಲಿ ಅಡ್ಡಬಂದ ಈ ಕ್ಷುದ್ರಪ್ರಾಣಿಯನ್ನು ಕಂಡು ಕೋಪದಿಂದ ಸುಂಡಿಲಲ್ಲಿ ಸುತ್ತಿ ದೂರ ಎಸೆದುಬಿಟ್ಟು ತನ್ನ ಹಾದಿಯನ್ನು ಹಿಡಿದನು! "ಭಗವಂತನು, ಸಕಲಪ್ರಾಣಿಗಳಲ್ಲಿಯೂ ವಾಸವಾಗಿರುವನು; ಸಕಲಪ್ರಾಣಿಗಳೂ ಆತನ ಅಂಶಗಳೇ ಸರಿ. ಮದ್ದಾನೆಯಾದರೇನಾಯಿತು? ಕರುಣಾಳುವಾದ ಭಗವಂತನು ನನಗೆ ಅಪಾಯಮಾಡುವ ಬಗೆಯೆಂತು? ನಾನೇನು ಅಂತಹ ಅಪರಾಧ ಮಾಡಿದ್ದೇನೆ." ಎಂದು ಮುಂತಾಗಿ ಯೋಚಿಸುತ್ತಿದ್ದ ಶಿಷ್ಯನ ಆಲೋಚನೆಯು ನಡೆದಿರುವಾಗಲೇ ಗಜೇಂದ್ರ ನಾರಾಯಣನ ಹಿಡಿತದಿಂದ ಸ್ಮೃತಿತಪ್ಪಿದ ಆತನ ಶರೀರವು ಹತ್ತುಮಾರು ದೂರದಲ್ಲಿ ಸಿಡಿದುಬಿದ್ದಿತು.

ಮದ್ದಾನೆಯು ಹೊರಟುಹೋದಬಳಿಕ ಸನ್ಯಾಶಿಯ ಮಿಕ್ಕ ಶಿಷ್ಯರು ತಮ್ಮ ಗೆಳೆಯನ ಸ್ವಭಾವವನ್ನು ಅರಿತವರಾದುದರಿಂದ ಅವನ ಅವಸ್ಥೆಯು ಏನಾಗಿರುವದೋ ನೋಡಬೇಕೆಂದು ಅಲ್ಲಿಗೆಬಂದು ಅತ್ತಿತ್ತ ಹುಡುಕುತ್ತಿರಲು ಒಂದೆಡೆಯಲ್ಲಿ ಮೈಯೆಲ್ಲ ನುಗ್ಗುನುಗ್ಗಾಗಿ ಸ್ಮೃತಿಯಿಲ್ಲದೆ ಬಿದ್ದಿರುವ ತಮ್ಮ ಗೆಳೆಯನನ್ನು ನೋಡಿದರು. ಅದನ್ನು ನೋಡಿ ಅವರೆಲ್ಲರೂ ಸೇರಿ ಆತನನ್ನು ಎತ್ತಿಕೊಂಡು ತಮ್ಮ ಆಶ್ರಮಕ್ಕೆ ಒಯ್ದು ಪರಿಪರಿಯಿಂದ ಉಪಚರಿಸಲು ತಾಸೆರಡು ತಾಸಿನ ತರುವಾಯ ಅವನಿಗೆ ತುಸು ಎಚ್ಚರವುಂಟಾಯಿತು. ಮೆಲ್ಲನೆ ಕಣ್ಣು ತೆರೆದನು. ಆನೆಯ ಸುಂಡಿಲದ ಬಿಗಿಯಾದ ಹಿಡಿತದಿಂದಲೂ

ದೂರಸಿಡಿದುಬಿದ್ದ ಪೆಟ್ಟಿನಿಂದಲೂ ಮೈಯ ಕೀಲುಗಳೆಲ್ಲ ಶಿಥಿಲವಾದಂತಾಗಿತ್ತು. ಮತ್ತೆ ರಡು ತಾಸುಗಳವರೆಗೆ ಎಡೆಬಿಡದೆ ಉಪಚರಿಸಿದ ಬಳಿಕ ಶಿಷ್ಯನು ಮಾತಾಡತೊಡಗಿದನು. ಆಗ ಅವನ ಗೆಳೆಯರು "ಅಣ್ಣಾ, ಮದ್ದಾನೆಯು ಬರುವುದು ತಿಳಿದೊಡನೆ ನಾವೆಲ್ಲರೂ ಕಾಲಿಗೆ ಬುದ್ಧೀ ಹೇಳಿ ಪಾರಾದೆವು. ನೀನೊಬ್ಬನು ಮಾತ್ರ ಅದರ ಕೈಗೆ ಸಿಕ್ಕಿಬಿದ್ದದು ಹೇಗೆ?" ಎಂದು ಕೇಳಿದರು.

ಅದಕ್ಕೆ ಅವನು—"ಗುರುಗಳು ಆ ದಿನ ನಮ್ಮೆಲ್ಲರಿಗೆ ಅಪ್ಪಣೆಕೊಡಿಸಿದುದು ನಿಮ್ಮ ಸ್ಮರಣೆಯಲ್ಲಿಲ್ಲವೆಂದು ತೋರುವುದು. ಸಕಲ ಪ್ರಾಣಿಗಳೂ ಶ್ರೀಮನ್ನಾರಾಯಣನ ಅಂಶಗಳೇ ಆಗಿರುವದರಿಂದ ಗಜೇಂದ್ರ ನಾರಾಯಣನು ಮಾಡಿದಂತಾಗಲೆಂದು ಸುಮ್ಮನೆ ಇದ್ದೆನು; ಮತ್ತು ಹತ್ತಿರಕ್ಕೆ ಬಂದೊಡನೆ ಸಾಷ್ಟಾಂಗ ನಮಸ್ಕಾರಮಾಡಿದೆನು" ಎಂದನು.

ಆಗ ಅವನ ಗೆಳೆಯರಲ್ಲೊಬ್ಬನು-"ಅಣ್ಣಾ, ನೀನು ಗುರುಗಳು ಹೇಳಿದ ಮಾತಿನ ರಹಸ್ಯವನ್ನು ಸರಿಯಾಗಿ ತಿಳಿದುಕೊಂಡಂತೆ ತೋರಲಿಲ್ಲ. ಮದ್ದಾನೆಯು ಶ್ರೀಮನ್ನಾರಾಯಣನ ಅಂಶವೇ ಆಗಿರುವಂತೆ ಅದರ ಹಿಂದಿನ ಆನೆಯ ಮೇಲೆ ಕುಳಿತ ಮಾವುತನೂ ಆತನ ಅಂಶವೇ ಅಲ್ಲವೇ? ಅಂದಮೇಲೆ ಗಜೇಂದ್ರನಾರಾಯಣನಲ್ಲಿ ವಿಶ್ವಾಸವಿರುವ ನೀನು ಆ ಮಾವುತನಾರಾಯಣನ ಮಾತಿನಲ್ಲಿ ಅವಿಶ್ವಾಸ ತೋರಿಸಿದುದೇಕೆ? ಮಾವುತನಾರಾಯಣನು "ಓಡಿರಿ, ಓಡಿ ಪಾರಾಗಿರಿ" ಎಂದು ಅಪ್ಪಣೆಕೊಡಿಸಿದಂತೆ ನೀನೇಕೆ ನಡೆಯಲಿಲ್ಲ? "ಸಕಲ ಪ್ರಾಣಿಗಳೂ ಈಶ್ವರಾಂಶಸಂಭೂತಗಳಾಗಿರುವದರಿಂದ ಅವನ್ನೆಲ್ಲ ಒಂದೇ ದೃಷ್ಟಿಯಿಂದ ನೋಡಬೇಕೆಂಬ" ವಾಕ್ಯವು ಕೇವಲ ಶಬ್ದಾರ್ಥಗಳನ್ನು ಅನುಸರಿಸಿ ನಡೆಯಲಿಕ್ಕೆ ಬರುವಂಥದಲ್ಲ. ಪ್ರಸಂಗಾನುಸಾರವಾಗಿ ತಾರತಮ್ಯಜ್ಞಾನದಿಂದ ನಡೆದುಕೊಳ್ಳಬೇಕು. ತನ್ನಿಂದ ಯಾವದೊಂದು ಪ್ರಾಣಿಗೆ ಕೆಡಕಾಗುವ ಪ್ರಸಂಗವಿದ್ದಾಗ ಮಾತ್ರ ಇದನ್ನು ಅಕ್ಷರಶಃ ಅನುಸರಿಸಿ ನಡೆಯಬೇಕು. ಆದರೆ ಅನ್ಯರಿಂದ ತನಗೆ ಆಪತ್ತು ಸಂಭವಿಸುವ ಸಮಯವಿದ್ದಲ್ಲಿ ಗಜೇಂದ್ರನಾರಾಯಣನ್ನು ಆಶ್ರಯಿಸದೆ ಮಾವುತನಾರಾಯಣನನ್ನೇ ಅನುಸರಿಸಬೇಕು. ಗುರೂಪದೇಶವನ್ನು ಬರೇ ಕೇಳಿಕೊಂಡರೆ ತೀರದು. ತಾರತಮ್ಯಜ್ಞಾನವಿಲ್ಲದ ಮೂಢಶ್ರದ್ಧೆಯು ಗ್ರಾಹ್ಯವಾದುದಲ್ಲ" ಎಂದು ಉಪದೇಶಿಸಿದನು.

ಸಾ॥ ಹಿರಿಯರುಪದೇಶದೊಳ್ ವಿಶ್ವಾಸವಿರಬೇಕು ।
ಮರೆಯಲಾಗದು ತತ್ವವದರ ॥
ಪರರ ಪೀಡಿಸಲಾಗದಂತೆಯೆ ಪರರಿಂದ ।
ಬರುವ ಪೀಡೆಯ ನೋಡಿ ನಡೆಯೈ ॥ ೧ ॥

## ೨. ರಾಮನಾಮಮಹಿಮೆ.



ವಿಭೀಷಣನ ಹೆಸರನ್ನು ನಮ್ಮಲ್ಲಿ ಎಲ್ಲರೂ ಬಲ್ಲರು. ಅವನು ರಾವಣನ ತಮ್ಮನು. ಹತ್ತುತಲೆ ಇಪ್ಪತ್ತು ತೋಳಿನ ಆ ಭೀಕರಾಕಾರದ ಆ ರಾಕ್ಷಸ ರಾವಣನು ಲಂಕೆಯ ಅರಸನಾಗಿದ್ದನು. ಶ್ರೀರಾಮಚಂದ್ರನ ಕಡುಹಗೆಯಾದ ಆತನ ತಮ್ಮ ವಿಭೀಷಣನು ರಾಮಚಂದ್ರನ ಪರಮಭಕ್ತನು! ರಾವಣನಿಗೆ ರಾಮಚಂದ್ರನ ಮೇಲೆ ಕಡುವೈರವಿರುವಂತೆ ವಿಭೀಷಣನಿಗೆ ಆತನಲ್ಲಿ ಅತುಲವಾದ ಶ್ರದ್ಧೆಯಿದ್ದಿತು. ಒಂದುದಿನ ಅವನ ಬಳಿಗೆ ಒಬ್ಬ ಬ್ರಾಹ್ಮಣನು ಬಂದು ಅಣ್ಣಾ, ನನಗೆ ಈ ಸಮುದ್ರವನ್ನು ದಾಟಿ ಹೋಗಬೇಕಾಗಿದೆ. ನೀನೇನೋ ರಾಮಭಕ್ತನು. ನಿನ್ನ ಆ ರಾಮಭಕ್ತಿಯ ಬಲದಿಂದ ನನಗೆ ಈ ಸಮುದ್ರವನ್ನು ದಾಟುವದಕ್ಕೆ ಒಂದು ಮಾರ್ಗವನ್ನು ತೋರಿಸಬಲ್ಲೆಯಾ? ಎಂದನು.

ಆಗ ವಿಭೀಷಣನು “ಸರಿ. ಇದಕ್ಕೇತಕ್ಕೆ ಇಷ್ಟೊಂದು ಯೋಚಿಸುವದು? ನಾನು ನಿನಗೆ ಮಾರ್ಗವನ್ನು ತೋರಿಸಬಲ್ಲೆನು.” ಎಂದು ನುಡಿದು ಒಂದು ಎಲೆಯ ಮೇಲೆ “ಶ್ರೀರಾಮಚಂದ್ರಾಯ ನಮಃ” ಎಂದು ಬರೆದು ಮಡಿಚಿ ಅದನ್ನು ಅವನ ಸೆರಗಿನಲ್ಲಿ ಕಟ್ಟಿ “ನಡೆ, ಇನ್ನು ಮೇಲೆ ನೀನು ಸಮುದ್ರವನ್ನು ನಿರಾಯಾಸವಾಗಿ ದಾಟಬಹುದು. ಜಲದ ಮೇಲೆ ಶಿಲೆಯ ಮೇಲೆ ನಡೆದಂತೆಯೇ ನಡೆಯಬಹುದು. ಆದರೆ, ನೀನು ಈ ಸೆರಗಿನೊಳಗಿನ ಗಂಟನ್ನು ಮಾತ್ರ ಬಿಚ್ಚಕೂಡದು.” ಎಂದು ಹೇಳಿ ಕಳುಹಿಸಿದನು.

ಬ್ರಾಹ್ಮಣನು ಸಮುದ್ರವನ್ನು ದಾಟುವದಕ್ಕಾಗಿ ನಡೆದನು. ಸಮುದ್ರಕ್ಕೆ ಹೋಗಿ ನೀರಿನ ಮೇಲೆ ನೆಲದ ಮೇಲೆ ನಡೆಯುವಂತೆಯೋ ನಿರಾಯಾಸವಾಗಿ ನಡೆಯತೊಡಗಿದನು. ಆಗ ಅವನ ಮನಸ್ಸಿನಲ್ಲಿ ಇನ್ನಿಲ್ಲದಷ್ಟು ಆಶ್ಚರ್ಯವಿಸ್ಮಯಗಳುಂಟಾಗಿ ಬೆಪ್ಪಾಗಿ ನಿಂತು ಬಿಟ್ಟನು. “ವಿಭೀಷಣನು ಎಂತಹ ಮಾಟಮಾಡಿದನೋ, ತನ್ನ ಸೆರಗಿನೊಳಗಿನ ಗಂಟಿನಲ್ಲಿ ಎಂತಹ ಮಂತ್ರವಿರುವದೋ, ಆ ಮಂತ್ರದ ಮಹಿಮೆಯೇನೋ ಅಗಾಧವಾಗಿದೆ. ನಾನು ಅದನ್ನು ತಿಳಿದುಕೊಂಡು ಬಿಟ್ಟರೆ ಪ್ರತಿಸಾರೆ ವಿಭೀಷಣನ ಬಳಿಗೆ ಹೋಗುವ ಕಾರಣವೇ ಉಳಿಯದು.” ಎಂದು ಯೋಚಿಸತೊಡಗಿದನು. ಉತ್ಕಂಠೆಯೂ ಸ್ವಾರ್ಥವೂ ಅವನನ್ನು ಬಲವಾಗಿ ಪೀಡಿಸತೊಡಗಿದವು. ಮುಂದೆ ನಡೆಯಲು ಮನಸ್ಸಾಗದು. ಸೆರಗಿನೊಳಗಿನ ಗಂಟನ್ನು ಕೈಯಲ್ಲಿ ತೆಗೆದುಕೊಂಡು ಮೂರು ನಾಲ್ಕು ಸಲ ತಿರುತಿರುವಿ ನೋಡಿದನು. ಗಂಟನ್ನು ಉಚ್ಚುವುದಕ್ಕೆ ಕೈಬೆರಳು ಹಾತೊರೆದು ಮುಂದೆ ಬಂದೊಡನೆ ವಿಭೀಷಣನ ಆಜ್ಞೆಯ ನೆನಪಾಗಲು ಹಿಂದೆ ಹೋಗುವುದು.

ಹೀಗೆ ವಿಚಾರಮಾಡುತ್ತ ಮಾಡುತ್ತ ಮುಂದೆ ನಡೆಯತೊಡಗಿದನು. ಮುಂದೆ ಮುಂದೆ ನಡೆದಂತೆ ಬ್ರಾಹ್ಮಣನ ಮನಸ್ಸಿನೊಳಗಿನ ಉತ್ಕಂಠೆಯು ಪ್ರಬಲವಾಗುತ್ತ ನಡೆಯಿತು. ಅಹಹಾ! ಇಂತಹ ಆಳವಾದ ಸಮುದ್ರದಲ್ಲಿ ನೆಲದ ಮೇಲೆ ನಿಲ್ಲುವಂತೆ ನಿಂತಿರುವೆನಲ್ಲಾ! ವಿಭೀಷಣನು ಎಂತಹ ಮಾಟಗಾರನು? ಎಂದು ಯೋಚಿಸುತ್ತ ಮುಂದಕ್ಕೆ ಸಾಗಿರುವಾಗ ಅವನಿಗೆ ಹೊಸದೊಂದು ವಿಚಾರವು ಸೂಚಿಸಿತು. "ವಿಭೀಷಣನು ನನಗೆ ಈ ಗಂಟನ್ನು ಉಚ್ಚಕೂಡದೆಂದು ಅಪ್ಪಣೆಮಾಡಲು ಕಾರಣವೇನು? ಆ ಮಂತ್ರವನ್ನು ನಾನು ತಿಳಿಯಕೂಡದೆಂಬದೇ ಅವನ ಉದ್ದೇಶವಾಗಿರಬೇಕು. ಮೇಲಾಗಿ ನಾನು ಆತನ ಅಪ್ಪಣೆಯನ್ನು ಮೀರಿ ಈ ಗಂಟನ್ನು ಬಿಚ್ಚಿದರೆ ಆತನು ನನ್ನ ಮೇಲೆ ಕೋಪಗೊಳ್ಳಬಹುದಲ್ಲವೇ? ಆಗಲಿ, ನಾನು ಆ ಮಂತ್ರವನ್ನು ತಿಳಿದುಕೊಂಡು ಬಿಟ್ಟ ಬಳಿಕ ನನಗೆ ಅವನ ಭಯವೇನು? ತಿರುಗಿ ಅವನ ಬಳಿಗೆ ಹೋಗದೆ ಇದ್ದುಬಿಟ್ಟರೆ ತೀರಿತು." ಮುಂತಾದ ದುರ್ವಿಚಾರಗಳು ಅವನ ಮನಸ್ಸನ್ನು ಆಕ್ರಮಿಸಿದವು. ಕೊನೆಗೆ ಬ್ರಾಹ್ಮಣನು ತನ್ನ ಸೆರಗಿನೊಳಗಿನ ಗಂಟನ್ನು ಬಿಚ್ಚುವದನ್ನು ನಿರ್ಣಯಿಸಿದನು. ಇಷ್ಟರಲ್ಲಿ ಅವನು ಸಮುದ್ರದ ಎರಡನೆಯ ದಂಡೆಗೆ ಸಮೀಪಿಸಿದ್ದನು.

ಬ್ರಾಹ್ಮಣನು ತನ್ನ ಸೆರಗಿನೊಳಗಿನ ಗಂಟನ್ನು ಬಿಚ್ಚಿ ಎಲೆಯ ಮಡಿಕೆಯನ್ನು ಬಿಡಿಸಿ ನೋಡಿದನು. ಆಶ್ಚರ್ಯ! ಅದರಲ್ಲಿ ಮಂತ್ರವಿಲ್ಲ; ಮಾಟವಿಲ್ಲ. ಬರೇ 'ಶ್ರೀರಾಮಚಂದ್ರಾಯ ನಮಃ' ಎಂದಿಷ್ಟೇ ಬರೆದಿತ್ತು. ಬ್ರಾಹ್ಮಣನು 'ಪಿಶ್! ಇದರಲ್ಲೇನಿದೆ? ವಿಭೀಷಣನು ಏನೋ ಮಾಟಮಾಡಿ ನನ್ನ ಕಣ್ಣು ಕಟ್ಟುವದಕ್ಕೆ ಇದರಲ್ಲಿ ಇಷ್ಟೇ ಬರೆದು ಕಟ್ಟಿಕೊಟ್ಟಿರುವನು, ಕೇವಲ ರಾಮಚಂದ್ರನ ಹೆಸರು ಸಮುದ್ರವನ್ನು ದಾಟಿಸಬಲ್ಲದೇ?' ಎಂದು ಯೋಚಿಸುತ್ತಿರುವಷ್ಟರಲ್ಲಿ ನಿಂತಲ್ಲಿಯೇ ನೀರಲ್ಲಿ ಮುಳುಗಿಹೋದನು.

ಲೋಕದಲ್ಲಿ ವಿಶ್ವಾಸವೇ ಫಲಕಾರಿಯು. ವಿಶ್ವಾಸಬಲದಿಂದ ಸಮುದ್ರವನ್ನುತ್ತರಿಸಬಹುದು. ಉರಿವ ಬೆಂಕಿಯಲ್ಲಿರಬಹುದು. ಇಷ್ಟೇ ಏಕೆ? ಈ ಭವಸಾಗರವನ್ನೇ ಈಸಿ ಪಾರಾಗಬಹದು. ಅದಿಲ್ಲದಿದ್ದರೆ ಯಾವದೂ ಇಲ್ಲ.

ಸಾಂ॥ **ವಿಶ್ವಾಸವಂತರಿಗೆ ಬಹುಸುಲಭ ಸಾಧ್ಯವೈ।**
**ಶಾಶ್ವತದ ಸುಖವಿಹದೆ ಪರದೆ॥**
**ವಿಶ್ವಾಸವಿರದಿರ್ದೊಡೀಶ್ವರನ ಮಹಿಮೆಯೊಳ್।**
**ನಶ್ವರವು ನರಜನ್ಮದಿರವು॥ ೧॥**

## ೩. ಭೀಷ್ಮಾಚಾರ್ಯರು.



ಕೌರವರು ಕುಮತಿಗಳು. ಪಾಂಡವರು ಸಜ್ಜನರು. ಆರಂಭದಿಂದಲೂ ಅವರವರೊಳಗೆ ದಾಯಾದ ಮತ್ಸರವು ಹೊತ್ತಿ ಉರಿಯುತ್ತಲಿತ್ತು. ಭೀಷ್ಮ, ದ್ರೋಣಾದಿಗಳು ಪಾಂಡವಪಕ್ಷಪಾತಿಗಳಾಗಿ ಕೌರವನಲ್ಲಿ ವಾಸವಾಗಿರುವರು. ಕೌರವನಿಗೆ ಪ್ರತಿಪ್ರಸಂಗದಲ್ಲಿಯೂ ಪರಿಪರಿಯಿಂದ ಬುದ್ಧೀ ಹೇಳುವರು. ಪಾಂಡವರನ್ನು ಉಳಿಸಿಕೊಳ್ಳಲು ಯತ್ನಿಸುವರು. ಬಾಲ್ಯದೊಳಗಿನ ಚಿಕ್ಕಪುಟ್ಟ ಕಲಹಗಳೆಲ್ಲಾ ಮುಗಿಯಲು ಅರಗಿನ ಅರಮನೆಯಲ್ಲಿ ಪಾಂಡವರನ್ನು ಸುಟ್ಟುಬಿಡುವ ಆಲೋಚನೆಯಾಯಿತು. ಜೂಜಿನಲ್ಲಿ ಪಾಂಡವರನ್ನು ಸೋಲಿಸಿ ಬೀದಿಯ ಭಿಕಾರಿಗಳಂತೆ ಅಡವಿಗಟ್ಟಿದುದೂ ಆಯಿತು. ಕೊನೆಗೆ ಭಾರತಯುದ್ಧದ ಪ್ರಳಯಾಗ್ನಿಯು ಹೊತ್ತಿ ಉರಿಯಿತು.

ಕೌರವ-ಪಾಂಡವರೊಳಗೆಲ್ಲಾ ಹಿರಿಯನಾದ ಭೀಷ್ಮಾಚಾರ್ಯನು, ಕೌರವಪಡೆಯ ನಾಯಕನಾಗಿ ಪಾಂಡವಸೈನ್ಯದೊಡನೆ ಯುದ್ಧವನ್ನು ಹೂಡಬೇಕಾಯಿತು; ಅಕ್ಷೋಹಿಣೀ ಸಂಖ್ಯೆಯ ಪಾಂಡವಸೈನ್ಯವನ್ನೆಲ್ಲ ತುಂಡುಗಡಿದು ೧೩-೧೪ ದಿವಸಗಳವರೆಗೆ ಯುದ್ಧಮಾಡಿ ಕೊನೆಗೆ ಶರಪಂಜರದ ಮೇಲೆ ದೇಹನಿಟ್ಟನು. ಇನ್ನವನಿಗೆ ಯಾವ ಇಚ್ಛೆಯೂ ಇರಲಿಲ್ಲ. ಮರಣವೇ ಅವನ ಧ್ಯೇಯ! ಪರಮಾತ್ಮನ ಲೀಲೆಯನ್ನು ನೋಡಿ ನೋಡಿ ಅವನು ಮೂಢನಾಗಿದ್ದನು. ಪ್ರಪಂಚದೊಳಗಿನ ಕಾರ್ಯಕಲಾಪಗಳಿಗೆ ಕಾರಣವನ್ನು ಶೋಧಿಸಲು ಯತ್ನಿಸುವದು ಕೇವಲ ಮೂಢತನವೆಂದು ಅವನು ಭಾವಿಸುತ್ತಿದ್ದನು.

ಕೊನೆಗೆ ಭೀಷ್ಮಾಚಾರ್ಯನ ಅವತಾರಸಮಾಪ್ತಿಯ ದಿನವು ಸಮೀಪಿಸಿತು. ಆಗ ಪಾಂಡವರೂ, ಶ್ರೀಕೃಷ್ಣನೂ ಇನ್ನೂ ಅನೇಕರು ಅವನು ಶರಪಂಜರದಲ್ಲಿ ಮಲಗಿರುವ ಸ್ಥಳಕ್ಕೆ ಬಂದರು. ಎಲ್ಲರೂ ಸುತ್ತರಿದು ನಿಂತಿರಲು ಭೀಷ್ಮಾಚಾರ್ಯನು ಅವರೆಲ್ಲರನ್ನು ನಿಟ್ಟಿಸಿ ನೋಡಿ ಎರಡೂ ಕಣ್ಣುಗಳಿಂದ ದಳದಳ ನೀರು ಸುರಿಸಿ ಅಳತೊಡಗಿದನು. ಕೃಷ್ಣಾರ್ಜುನರು ಆತನ ಶಿರೋಭಾಗದಲ್ಲಿ ನಿಂತಿದ್ದರು. ಅರ್ಜುನನು "ಕೃಷ್ಣಾ, ಏನಿದು? ಸರ್ವಸಂಗಪರಿತ್ಯಾಗಮಾಡಿ ಶರಪಂಜರದಲ್ಲಿ ದೇಹವನ್ನಿಡುವಾಗಲೂ ಕೂಡ ಎಳ್ಳಷ್ಟು ವ್ಯಸನವನ್ನು ತೋರಿಸದ ಸ್ಥಿರಮನಸ್ಸಿನ ಆಚಾರ್ಯರು ಈಗ ಕಣ್ಣೀರು ಸುರಿಸುವದನ್ನು ನೋಡಿದರೆ ಆಶ್ಚರ್ಯವಾಗುವದಿಲ್ಲವೇ? ಪಿತಾಮಹ ಭೀಷ್ಮಾಚಾರ್ಯರು,-ಸತ್ಯವಾದಿಗಳು, ಜಿತೇಂದ್ರಿಯರು, ಅಷ್ಟವಸುಗಳಿಗೆ ಸರಿಸಮಾನರಾದವರು, ಇಂತಹ ಮಹಾನುಭಾವರು ಕೂಡ ದೇಹತ್ಯಾಗದ ಸಮಯದಲ್ಲಿ ಕಣ್ಣೀರು ಸುರಿಸುವದನ್ನು ನೋಡಿ ನಿಸಗ ಅರಿದೆನಿಸುವದಿಲ್ಲವೇ? ಪ್ರಪಂಚವನ್ನೆಲ್ಲಾ ಆವರಿಸಿರುವ ಆ ಮಾಯೆಯು ಇಂತಹ ಮಹಾನುಭಾವರನ್ನೂ ಬಿಡಲಿಲ್ಲವಲ್ಲವೇ? ಎಂದನು.

ಆಗ ಶ್ರೀಕೃಷ್ಣನು:—ಆಚಾರ್ಯರೇ, ತಮ್ಮಂಥವರಿಗೂ ಈ ಮಾಯೆಯ ಬಲೆಯನ್ನು ಹರಿದೊಗೆಯಲು ಸಾಧ್ಯವಾಗುವದಿಲ್ಲವಲ್ಲಾ, ಕೊನೆಗೆ ಆ ಮಾಯೇ ಜಯವನ್ನು ಹೊಂದಿತು. ದೇಹತ್ಯಾಗದ ಸಮಯದಲ್ಲಿ ತಮ್ಮ ಕಣ್ಣುಗಳಲ್ಲಿ ನೀರು ತುಂಬಿಸಿಬಿಟ್ಟಿತು!

ಇದನ್ನು ಕೇಳಿ ಭೀಷ್ಮಾಚಾರ್ಯರು ಶ್ರೀಕೃಷ್ಣನ ಕಡೆಗೆ ಮೋರೆಯನ್ನು ತಿರುಗಿಸಿ ದೃಢವಾದ ಸ್ವರದಿಂದ—"ಇಲ್ಲ, ನಾನು ಆ ಮಾಯೆಯ ಬಲೆಯೊಳಗೆ ಸಿಲುಕಿದವನಲ್ಲ. ಕೃಷ್ಣಾ, ಈ ಸಂಗತಿಯೂ ನನ್ನ ಕಣ್ಣುಗಳಲ್ಲಿ ನೀರುತುಂಬಿರುವದರ ಕಾರಣವೂ ನಿನಗೆ ತಿಳಿಯದೆ ಹೀಗೆ ಮಾತಾಡುವೆಯೆಂದು ನಾನು ಹೇಳಲಾರೆನು. ಎಲ್ಲವನ್ನೂ ಬಲ್ಲ ನೀನು ಈ ಮಾತನ್ನು ತಿಳಿಯದಿರುವದೆಂತು? ಆದರೂ ನನ್ನಿಂದಲೇ ಅನ್ನಿಸಬೇಕೆಂದು ನಿನ್ನ ವಿಚಾರವಿರಬೇಕು ಆಗಲಿ. ತಮ್ಮಾ! ಅರ್ಜುನಾ! ನನಗೆ ಈ ದೇಹದ, ಪ್ರಪಂಚದ ಮೋಹವು ಎಳ್ಳಷ್ಟು ಕೂಡ ಇರುವದಿಲ್ಲ. ಆದಕ್ಕಾಗಿ ನಾನು ಕಣ್ಣೀರು ಸುರಿಸುವದಿಲ್ಲ. ಆದರೆ ಈ ಭಗವಾನ್ ಶ್ರೀಕೃಷ್ಣನು ಆರಂಭದಿಂದಲೂ ಪಾಂಡವರಲ್ಲಿ ಅತ್ಯಂತ ಪ್ರೀತಿಯನ್ನು ತೋರಿಸುತ್ತಿರುವನು. ಮಾತುಮಾತಿಗೆ ನೀವು ಆತನನ್ನು ಅವಲಂಬಿಸುವಿರಿ. ಆತನು ಕೂಡ ನಿಮಗೆ ಸರ್ವ ವಿಧದಿಂದಲೂ ಸಹಾಯ ಮಾಡುತ್ತಿರುವನು. ಭಾರತ ಯುದ್ಧದಲ್ಲಿ ತಾನೇ ಕಡಿವಾಣವನ್ನು ಹಿಡಿದು ನಿನ್ನ ರಥದಲ್ಲಿ ಕುಳಿತು ಕುದುರೆಗಳನ್ನು ನಡಿಸಿದನು. ಇನ್ನೇನು ಮಾಡಬೇಕು? ಇಷ್ಟಾದರೂ ಆರಂಭದಿಂದ ಇಂದಿನವರೆಗೂ ಪಾಂಡವರು ಅನುಭವಿಸಿದ ಕಷ್ಟಪರಂಪರೆಗಳನ್ನು ನೋಡಿದರೆ ಯಾರ ಮನಸ್ಸು ತಾನೇ ಕಲ್ಲಾಗದು? ಈ ಮಾತಿನ ಗೂಢವು ನನಗೆ ಕೊನೆಯವರೆಗೂ ತಿಳಿಯದೆ ಹೋಯಿತಲ್ಲಾ, ಎಂದು ನನ್ನ ಕಣ್ಣುಗಳಲ್ಲಿ ನೀರುತುಂಬಿತು. ಈ ಮಾತು ನನ್ನ ಸ್ಮರಣೆಗೆ ಬಂದಾಗಲೆಲ್ಲಾ ನಾನು ಹೀಗೆಯೇ ಕಣ್ಣೀರು ಸುರಿಸುತ್ತಿದ್ದೆನು. ಇಂದು ನೀವಿಬ್ಬರೂ ನನ್ನ ಮುಂದೆ ಬಂದು ನಿಂತುದನ್ನು ನೋಡಿದೊಡನೆ ನನಗೆ ಪುನಃ ಅದೇ ಮಾತಿನ ನೆನಪಾಗಲು ಅಳತೊಡಗಿದನಲ್ಲದೆ ಬೇರೆಯಿಲ್ಲ" ಎಂದನು. ಅರ್ಜುನನು ತಪ್ಪು ಒಪ್ಪಿಕೊಂಡು ನಿರುತ್ತರನಾದನು.

ಭಗವಂತನು ಅನಂತನು. ಆತನ ಶಕ್ತಿಯು ಅನಂತ; ಕೃತಿಗಳೂ ಅನಂತ. ಆದುದರಿಂದ ಆತನ ವ್ಯಾಪಾರಗಳ ರಹಸ್ಯವನ್ನು ತಿಳಿಯುವದು ಮಾನವ ಮಾತ್ರರಿಗೆ ಸಾಧ್ಯವಲ್ಲ. ಕಾರಣ ನಾವು ಆತನ ಕಾರ್ಯಗಳಿಗೆ ಕಾರಣಗಳನ್ನು ಶೋಧಿಸಲು ವ್ಯರ್ಥ ಶ್ರಮಪಡದೆ ಆತನಲ್ಲಿ ತ್ರಿಕರಣಶುದ್ಧಿಯಿಂದ ಸರ್ವಸ್ವವನ್ನು ಅರ್ಪಿಸಿ ನಡೆಯುವದೇ ನಮ್ಮ ಉದ್ಧಾರದ ಮಾರ್ಗವಲ್ಲದೆ ಬೇರೆಯಿಲ್ಲ.

ಸಾ॥ **ಭಗವಂತನಾದ್ಯಂತ ರಹಿತನಾಗಿರುವಂತೆ।**
**ಜಗದೊಳಾತನ ಲೀಲೆಯಿಹುದು॥**
**ಸೊಗವಿಂದು ಕಷ್ಟವಿಂದೆನಗೆಂದು ಬಳಲದೆ।**
**ಭಗವಂತನನೆ ನಂಬಿನಡೆಯೈ॥೧॥**

---

## ೪. ಹುಮ್ಮಾಹಕ್ಕಿ.





ವೇದದಲ್ಲಿ ಒಂದು ಜಾತಿಯ ಹಕ್ಕಿಗಳ ವರ್ಣನೆಯಿದೆ. ಅವು ಆಕಾಶದಲ್ಲಿ ದೂರ, ದೂರ, ಬಹುದೂರದಲ್ಲಿ ಹಾರಾಡುತ್ತಿರುವವು. ಮತ್ತು ಹೀಗೆ ಹಾರುತ್ತಿರುವಾಗಲೇ ತತ್ತಿಯನ್ನಿಡುವವು. ನಿರಾಧಾರವಾದ ಆಕಾಶದಲ್ಲಿ ಬಿದ್ದ ತತ್ತಿಯು ಭೂಮಿಗೆ ಬೀಳುವದು ಸಹಜವು. ಆದರೆ ಅವು ಆಕಾಶದಲ್ಲಿ ವರ್ಣಿಸಲಾರದಷ್ಟು ಎತ್ತರದಲ್ಲಿರುವದರಿಂದ ಆ ತತ್ತಿಗಳು ಕೆಳಗಿಳಿದು ಭೂಮಿಗೆ ಬಂದು ಮುಟ್ಟುವದಕ್ಕೆ ಹೆಚ್ಚು ವೇಳೆಯು ಹತ್ತುವದೆಂಬದು ಸ್ವಾಭಾವಿಕವೇ ಸರಿ. ಆದರೆ ಚಮತ್ಕಾರವೇನೆಂದರೆ ಹುಮ್ಮಾಹಕ್ಕಿಯ ತತ್ತಿಗಳು ಆಕಾಶದಿಂದ ಭೂಮಿಗೆ ಬೀಳುತ್ತಿರುವಾಗಲೇ ಪಕ್ವವಾಗಿ ಒಡೆಯುವವು; ಮರಿಯಾಗುವವು; ಮರಿಗಳಿಗೆ ಕಣ್ಣು ಬರುವದು; ಅವುಗಳ ಪಕ್ಕ ಬಲಿಯುವದು. ಆಗಲೇ ಆ ಮರಿಗಳಿಗೆ ತಾವು ಭೂಮಿಗೆ ಬಿದ್ದರೆ ತಮ್ಮ ಮೈಯ ಎಲುವುಗಳೆಲ್ಲ ಮುರಿದು ಹುಡಿಹುಡಿಯಾಗಿ ಸತ್ತು ಹೋಗುವೆವೆಂಬ ವಿಚಾರವು ಕೂಡ ಉದಯವಾಗುವದು. ಕೂಡಲೆ ಅವು ಆಕಾಶದ ಕಡೆಗೆ ಹಾರತೊಡಗಿ ತಾಯಿಯ ಬಳಿಯನ್ನೇ ಸೇರಿ ತನ್ನವರ ಗುಂಪಿನಲ್ಲಿ ಕೂಡಿಕೊಳ್ಳುವವು!

ಮನುಷ್ಯನ ಅವಸ್ಥೆಯೂ ಹೀಗೆಯೇ ಸರಿ. ಅವನು ಈ ಲೋಕದಲ್ಲಿ ಜನ್ಮತಾಳಿ ತಾನು ತನ್ನವರು ಎಂಬ ಮಾಯೆಯ ಬಲೆಯಲ್ಲಿ ಸಿಲುಕಿ ಅಧಃಪತನ ಹೊಂದತೊಡಗುವನು. ಅವತಾರವೆಂದರೂ ಕೆಳಗೆ ಇಳಿಯೋಣವೆಂದೇ ಅರ್ಥವು. ಮಾನವನು ಹೀಗೆಯೇ ಅಧಃಪತನ ಹೊಂದುತ್ತ ನಡೆದಿರಲು ನಡುದಾರಿಯಲ್ಲಿ ಜ್ಞಾನೋದಯವಾಯಿತೆಂದರೆ, ತನ್ನ ಭವಿತವ್ಯತೆಯೇನಾಗಬಹುದೆಂಬದರ ಅರಿವುಂಟಾಗಲು, ತನ್ನ ಆ ಜ್ಞಾನಶಕ್ತಿಯ ಬಲದಿಂದ ಈ ಮಾಯಾಪ್ರಪಂಚದ ಅಧಃಪತನದ ದಾರಿಯನ್ನು ಬಿಟ್ಟು ಊರ್ಧ್ವದೃಷ್ಟಿಯನ್ನಿಟ್ಟುಕೊಂಡು ನಡೆದು ಪುನಃ ಈಶ್ವರಸಾನ್ನಿಧ್ಯವನ್ನು ಹೊಂದುವನು.

ಸಾ॥ **ಗಗನದೊಳ್ ಸಂಚರಿಪ ಹುಮ್ಮಾಹಕ್ಕಿಗಳಂತೆ ।**
**ಜಗದ ಮಾಯಾಮೋಹದೊಳಗೆ ॥**
**ಹುಗಿದು ಬೀಳದೆ ನೀನು ಜಗದೊಡೆಯನಾಶ್ರಯುವ ।**
**ಸೊಗದೆ ಸಾರಲು ಯತ್ನನಡಿಸೈ ॥ ೧ ॥**

## ೫. ಹಾದಿಯೊಳಗಿನ ಹರಳು.



ಗೋವಿಂದರಾಯನು ಶ್ರೀಮಂತನು. ಸತ್ಕುಲದಲ್ಲಿ ಹುಟ್ಟಿದವನು. ನಾಲ್ಕು ಜನರಿಗೆ ಬೇಕಾದವನು. ಬೇಡಿದ ಬಡವರಿಗೆ ಇಲ್ಲವೆನ್ನದೆ ಆಪತ್ತಿ ನಲ್ಲಿರುವವರಿಗೆ ಮನಮುಟ್ಟಿ ಸಹಾಯ ಮಾಡುವನು. ತುಳಸಮ್ಮನು ಅವನಿಗೆ ಅನುರೂಪಳಾದ ಭಾರ್ಯೆ. ಮನೆತನದ ಯಾವ ಭಾರವೂ ಪತಿಯ ಮೇಲೆ ಬೀಳದಂತೆ ನೋಡಿಕೊಳ್ಳುವಳು. ಆಯವ್ಯಯವನ್ನು ನೋಡಿಕೊಳ್ಳುವಳು; ಆಳುಹೋಳುಗಳನ್ನು ವಿಚಾರಿಸಿಕೊಳ್ಳುವಳು. ಅನುರೂಪ ದಾಂಪತ್ಯದಿಂದಲೂ ದೈವದತ್ತ ಸಂಪತ್ತಿನಿಂದಲೂ ಮನೆತನವು ಆನಂದಮಯವಾಗಿದ್ದಿತು. ಆದರೆ—ಸುಖದಲ್ಲಿ ದುಃಖ; ಸಂಪತ್ತಿನಲ್ಲಿ ವಿಪತ್ತು. ಇದೀಗ ಪ್ರಪಂಚದ ಧರ್ಮ. ಮನೆಯಲ್ಲಿ ಮಕ್ಕಳಿಲ್ಲ! ಗೋವಿಂದರಾಯನೂ ತುಳಸಮ್ಮನೂ ನಾನಾ ವ್ರತೋಪವಾಸಗಳನ್ನು ಮಾಡಿದರು. ಹಲವು ದೇವರಿಗೆ ಹರಿಕೆ ಹೊತ್ತರು.

ಕೊನೆಗೆ ಗೋವಿಂದರಾಯನೂ ತುಳಸಮ್ಮನೂ ಕೂಡಿ ಆಲೋಚಿಸಿ ಕಾಶೀವಾಸಕ್ಕೆ ಹೊರಡುವದನ್ನು ನಿಶ್ಚಯಿಸಿದರು. ಮನಸ್ಸಿನೊಳಗಿನ ಮೋಹಾಸಕ್ತಿಗಳನ್ನು ತೊರೆಯದೆ ಕಾಶೀವಾಸ ಮಾಡಿದರೂ ಅಷ್ಟೇ, ವನವಾಸ ಮಾಡಿದರೂ ಅಷ್ಟೇ, ಎಂದು ತಿಳಿದು ಅವರು ತಮ್ಮ ಸ್ಥಿರಚರ ಆಸ್ತಿಗಳನ್ನೆಲ್ಲ ದೀನಾನಾಥರಿಗೆ ದಾನ ಮಾಡಿ ಉಟ್ಟ ಬಟ್ಟೆಯಲ್ಲಿ ಕಾಶಿಗೆ ಹೊರಟರು.

ಒಂದು ದಿನ ದಾರಿಯಲ್ಲಿ ಹೋಗುತ್ತಿರಲು ಒಂದು ಬೆಲೆಯುಳ್ಳ ವಜ್ರದ ಹರಳು ಬಿದ್ದಿರುವದನ್ನು ಗೋವಿಂದರಾಯನು ನೋಡಿದನು. ಹಿಂದಿನಿಂದ ಬರುತ್ತಿರುವ ತನ್ನ ಹೆಂಡತಿಯು ಇದನ್ನು ಕಂಡು ಎತ್ತಿಕೊಂಡು ಮೋಹದಲ್ಲಿ ಸಿಲುಕಬಹುದೆಂದು ಭಾವಿಸಿ ಅವನು ಅದನ್ನು ಕಾಲಬೆರಳುಗಳಲ್ಲಿ ಹಿಡಿದು ದೂರ ಎಸೆದನು. ಅದನ್ನು ನೋಡಿದ ತುಳಸಮ್ಮನು ನಕ್ಕು "ವಜ್ರದ ಹರಳನ್ನೂ ಹಾದಿಯೊಳಗಿನ ಹರಳನ್ನೂ ಅಷ್ಟೇ ನಿರ್ವಿಕಾರ ಚಿತ್ತದಿಂದ ನೋಡುವ ಶಕ್ತಿಯುಂಟಾದಾಗಲೇ ನಿಜವಾದ ವಿರಕ್ತಿಯುಂಟಾದಂತಾಗುವದು. ನಿಮಗೆ ಇನ್ನೂ ಅವುಗಳೊಳಗೆ ಭೇದ ತೋರುವದಲ್ಲವೇ? ಆ ಭೇದಬುದ್ಧಿಯನ್ನೂ ಬಿಡಲು ಯತ್ನಿಸಬೇಕು." ಎಂದಳು. ಗೋವಿಂದರಾಯನು ತನ್ನ ಪತ್ನಿಯು ವಿರಕ್ತಿಮಾರ್ಗದಲ್ಲಿಯೂ ತನಗಿಂತ ಒಂದಡಿ ಮುಂದಿರುವದನ್ನು ನೋಡಿ ಆನಂದಪಟ್ಟನು.

ಸಾಂ॥ **ದೈವೀ ಸಾಮ್ರಾಜ್ಯದೊಳಲೆವ ಸುಜ್ಞಾನಿಗಳು।**
**ಭೂವಿನುತ ಧನಕನಕ ಸುಖವ॥**
**ತಾವೇಕೆ ಬಯಸುವರು? ಮುತ್ತುರತ್ನಾದಿಗಳ।**
**ಗಾವಿಲರೆ? ಬಯಸುವೊಡವರು ॥ ೧ ॥**

## ೬. ಲಂಕಾವಿಜಯ.



ರಾಮಾಯಣದ ಪುಣ್ಯಕಥೆಯನ್ನು ಎಲ್ಲರೂ ಬಲ್ಲರು. ಲಂಕೆಯ ರಾಜನಾದ ರಾವಣನು ಲೋಕದಲ್ಲಿ ಅಪ್ರತಿಮವೀರನು. ಇಂದ್ರಾದಿ ಅಷ್ಟದಿಕ್ಪಾಲಕರು ಅವನ ದಾಸಾನುದಾಸರು. ರಾಕ್ಷಸರೆಲ್ಲರೂ ಅವನ ಅನುಯಾಯಿಗಳು. ದೇವತೆಗಳು ಅವನಿಂದ ಪರಾಜಿತರು; ಆದುದರಿಂದ ಅವನು ಮೂರುಲೋಕದಲ್ಲಿ ತನಗೆ ಸಮಾನರಾದವರು ಯಾರೂ ಇಲ್ಲೆಂದು ಹೆಮ್ಮೆಪಡುತ್ತಿದ್ದನು. ಈ ಅಹಂಕಾರದೊಡನೆ ಪರಸ್ತ್ರೀವ್ಯಾಮೋಹವೆಂಬ ದುರ್ಬುದ್ಧಿಯೂ ರಾವಣನಲ್ಲಿ ಉಂಟಾಯಿತು. ಇನ್ನೇನು ಬೇಕು? ಇಲ್ಲಿಗೆ ಅವನ ಉನ್ನತಿ ಮಾರ್ಗವು ಕೊನೆಗಂಡಿತು; ಅಧೋಗತಿಗೆ ಆರಂಭವಾಯಿತು. ಪರವನಿತೆ ಸೀತಾಪಹಾರವೇ ಅವನ ಸರ್ವನಾಶಕ್ಕೆ ಕಾರಣವಾಯಿತು. ಮಾರೀಚನ ಮಾಯಾಮೃಗದ ಕುಯುಕ್ತಿಯಿಂದ ರಾವಣನು ಸೀತೆಯನ್ನು ಅಪಹರಿಸಿಕೊಂಡೊಯ್ದ ವಾರ್ತೆಯನ್ನು ಜಟಾಯುವಿನಿಂದ ತಿಳಿದಬಳಿಕ ಶ್ರೀರಾಮಚಂದ್ರನು ಮಾರುತಿಯ ಮುಖದಿಂದ ಸೀತೆಯು ಅಶೋಕವನದಲ್ಲಿ ಶೋಕಸಾಗರದಲ್ಲಿ ಮುಳುಗಿ ದಿನಕಳೆಯುತ್ತಿರುವದನ್ನು ಕೇಳಿಕೊಂಡು ಸುಗ್ರೀವನೊಡನೆ ಸಖ್ಯ ಬೆಳಿಸಿ ಕರಡಿ ಕಪಿಗಳ ನೆರವಿನಿಂದ ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ ಲಂಕೆಯನ್ನು ಮುತ್ತಿದನು; ರಾಕ್ಷಸಕುಲವನ್ನೆಲ್ಲ ಸಂಹರಿಸಿ ಕೊನೆಗೆ ರಾವಣನನ್ನೂ ಕೊಂದು ಲಂಕಾಪಟ್ಟಣವನ್ನು ಜಯಿಸಿದನು. ಇದೀಗ ಲಂಕಾವಿಜಯದ ಕಥೆ.

ರಾವಣನ ವಧೆಯಾದನಂತರ ಶ್ರೀರಾಮಚಂದ್ರನು ಲಂಕಾಪಟ್ಟಣವನ್ನು ಪ್ರವೇಶಿಸಿದನು. ಆಗ ರಾವಣನ ಅರಮನೆಯಲ್ಲಿದ್ದ ಆತನ ತಾಯಿ **ನಿಕಷೆಯು** ರಾಮಚಂದ್ರನು ಬರುವ ವಾರ್ತೆಯನ್ನು ಕೇಳಿ ಓಡಿಹೋಗಲು ಯತ್ನಿಸಿದಳು. ದೈವಯೋಗದಿಂದ ರಾಮಚಂದ್ರನು ಲಕ್ಷ್ಮಣನೊಡನೆ ಅದೇ ದಾರಿಯಿಂದ ರಾವಣನ ರಾಜಧಾನಿಯನ್ನು ಪ್ರವೇಶಿಸುತ್ತಿದ್ದನು. ವಯಸ್ಸಿನಿಂದ ಮುಪ್ಪಡಿಸಿದ ನಿಕಷೆಯ ಶರೀರವು ಪುತ್ರಶೋಕದಿಂದ ಬತ್ತಿಹೋಗಿತ್ತು. ಮೈಯಲ್ಲಿ ಬಲವಿಲ್ಲದುದರಿಂದ ನಡೆಯುದಕ್ಕೆ ತುಂಬಾ ಕಷ್ಟವಾಗುತ್ತಿತ್ತು. ಹತ್ತು ಹೆಜ್ಜೆಗಳನ್ನು ಓಡಿ ದಣಿದು ಕ್ಷಣಹೊತ್ತು ನಿಂತು ಮತ್ತೆ ಓಡುವಳು. ಲಕ್ಷ್ಮಣನು ಅವಳ ಈ ಅವಸ್ಥೆಯನ್ನು ನೋಡಿ—“ಅಣ್ಣಾ, ಪ್ರಪಂಚವು ಬಹು ವಿಚಿತ್ರವಾದುದು. ಅಲ್ಲಿ ನೋಡು. ಅವಳು ನಿಕಷೆ; ರಾವಣನ ತಾಯಿ; ವಯೋಮಾನವನ್ನು ನೋಡಿದರೆ ಹೇಳಕೂಡದಷ್ಟು ಮುಪ್ಪುಬಂದಿದೆ. ರಾಜಾಧಿರಾಜನಾದ ಮಗನು ಸತ್ತನು. ಇಷ್ಟ ಜನರಲ್ಲಿಯೂ ಯಾರೊಬ್ಬರೂ ಉಳಿದಿಲ್ಲ. ಈ ಬಗೆಯಾದ ಅವಳ ಸಂಸಾರದ ಕಷ್ಟವನ್ನು ನೋಡಿದರೆ ಅವಳು ಮಲಗಿದಲ್ಲಿಯೇ ಅನ್ನನೀರುಗಳನ್ನು ತೊರೆದು ಪ್ರಾಣಬಿಡಬೇಕು. ಹೀಗಿದ್ದರೂ ನೀನು ಬರುವ ಸುದ್ದಿಯನ್ನು ಕೇಳಿದೊಡನೆ ಓಡಿ ಪಾರಾಗಿ ಬದುಕಿಕೊ

ಳ್ಳಲು ಹೊರಟಿರುವಳು! ಕಂಡೆಯಾ! ಅವಳಿಗೆ ಈ ಅವಸ್ಥೆಯಲ್ಲಿಯೂ ಬದುಕಿ ಉಳಿಯಬೇಕೆಂಬ ಆಶೆಯು ಯಾಕೆ ಉಂಟಾಗಿದ್ದೀತು? ನೀನು ಅವಳನ್ನು ಕೊಲ್ಲಲು ಹೊರಟಿಲ್ಲ; ಆ ಮಾತು ಬೇರೆಯೇ" ಎಂದನು.

ಆ ಮೇಲೆ ರಾಮಚಂದ್ರನ ಸೂಚನೆಯಂತೆ ಲಕ್ಷ್ಮಣನು ಅವಳ ಬಳಿಗೆ ಹೋಗಿ–"ಅಮ್ಮಾ, ಇಂತಹ ಮುಪ್ಪಿನಲ್ಲಿ ಇಷ್ಟೊಂದು ಸಾಂಸಾರಿಕ ಕಷ್ಟಗಳನ್ನು ಅನುಭವಿಸಿ, ಇನ್ನೂ ಬದುಕಿ ಉಳಿಯಬೇಕೆಂಬ ಆಶೆಯಿಂದ ನೀನು ಓಡಿಹೋಗುತ್ತಿದ್ದೆಯಲ್ಲ? ನಿನಗೆ ಈ ದುಃಖಮಯ ಸಂಸಾರದಲ್ಲಿ ಬದುಕಿ ಉಳಿಯುವದಕ್ಕಿಂತ ಸಾಯುವದೇ ಲೇಸೆನ್ನಿಸದಿರಲು ಕಾರಣವೇನು? ಇನ್ನು ಮೇಲೆ ನೀನು ಬದುಕಿ ಉಳಿದು ಮಾಡುವುದೇನು?" ಎಂದನು.

ಆಗ ನಿಕಷೆಯು:—"ತಮ್ಮಾ, ಲಕ್ಷ್ಮಣಾ, ನೀನು ಕೇಳುವ ಮಾತು ತೀರ ಸ್ವಾಭಾವಿಕವಾದದ್ದು. ಲೋಕದಲ್ಲಿ ಪುತ್ರಶೋಕದಂಥ ಶೋಕವು ಬೇರೊಂದಿಲ್ಲ. ಮುಪ್ಪಿನ ಕಾಲದಲ್ಲಿಯಂತೂ ಅಸಹ್ಯವೇ ಸರಿ. ರಾವಣ-ಕುಂಭಕರ್ಣರಂಥ ಮಹಾವೀರಾಧಿವೀರರು ಮರಣಹೊಂದಿದ್ದನ್ನು ಕಣ್ಣಾರೆ ಕಂಡ ನನ್ನ ಬಾಳು ಎಂತಹ ಯಮಯಾತನೆಗೆ ಸಮಾನವಾದುದೆಂದು ಹೇಳಲಿ? ಆದರೆ ನನಗೆ ಈಗಲೂ ಸಾಯುವ ಇಚ್ಛೆಯಿಲ್ಲ. ಯಾಕಂದರೆ ಈ ಪ್ರಪಂಚವು ಒಂದು ನಾಟಕಶಾಲೆಯು; ಭಗವಂತನೇ ಸೂತ್ರಧಾರಿ; ಆತನ ಇಚ್ಛಾನುಸಾರವಾಗಿ ಈ ಲೋಕದಲ್ಲಿ ನಾನಾಪಾತ್ರಗಳು ಬಂದು ಕುಣಿದಾಡಿ ಮರಣವೆಂಬ ಪಡದೆಯೊಳಗೆ ಮರೆಯಾಗುವವು. ಅದಕ್ಕಾಗಿ ನಾವು ಚಿಂತಿಸಿ ಫಲವೇನೆಂದು ಒಮ್ಮೊಮ್ಮೆ ಭಾಸವಾಗುವದು. ಅದೂ ಅಲ್ಲದೆ ಸತ್ತವರಿಗೆ ಅತ್ತು ನಾವೂ ಸತ್ತರೆ ಅದರಿಂದ ಫಲವೇನು? ಬದುಕಿ ಇದ್ದರೆ ಈ ಲೋಕದೊಳಗಿನ ಭಗವಂತನ ಬಗೆ ಬಗೆಯ ಲೀಲೆಗಳನ್ನಾದರೂ ನೋಡಬಹುದಲ್ಲವೇ? ಭಗವಂತನ ಆ ಲೀಲೆಗಳನ್ನು ನೋಡುವದಕ್ಕಾಗಿಯೇ ನಾನು ಇನ್ನೂ ಬದುಕಿ ಉಳಿಯಬೇಕೆನ್ನುತ್ತೇನೆ" ಎಂದಳು.

ಬಳಿಯಲ್ಲಿಯೇ ಇರುವ ರಾಮಚಂದ್ರನು ನಿಕಷೆಯ ಮಾತುಗಳನ್ನು ಕೇಳಿ ನಕ್ಕನು. ಮತ್ತು "ತಮ್ಮಾ, ಲೋಕದಲ್ಲಿ ಯಾರು ಈಕೆಯಂತೆ ಭಗವಂತನ ಲೀಲೆಗಳನ್ನು ನೋಡಲೆಂದೇ ಬದುಕುವರೋ ಅವರ ಬಾಳುವೆಯೇ ನಿಜವಾದ ಬಾಳುವೆ" ಎಂದು ನುಡಿಯಲು ಮುಂದೆ ನಡೆದರು.

ಸಾ॥ **ಭವಜಲಧಿಯೊಳು ಮುಳುಗಿಯುಳಿದುಳಿವ ನರನೆ ನೀಂ।**
**ಭವಬಾಧೆ—ಸುಖದುಃಖವೊದಗೆ ॥**
**ಭುವನವೀಶ್ವರನ ನಾಟಕಶಾಲೆಯೆಂದೆಣಿಸಿ।**
**ಸುವಿಧಾನದಿಂದ ನಡೆಯುವದು ॥**

---

## ೭. ಇಬ್ಬರು ಗುರುಗಳು.



ಒಬ್ಬ ಅವಧೂತನು ಒಂದುದಿನ ಅದೇನೋ ಕಾರ್ಯನಿಮಿತ್ತವಾಗಿ ದಾರಿ ಹಿಡಿದು ನಡೆದಿರಲು ಒಂದು ಕೆರೆಯ ದಂಡೆಯಲ್ಲಿ ಒಬ್ಬ ಬಲೆಗಾರನು ಬಲೆಯನ್ನು ಬೀಸಿ ಮೇಲೆ ಎಳೆದು ಅದರಲ್ಲಿ ಸಿಲುಕಿಬಂದ ಮೀನಗಳನ್ನು ಒಂದೊಂದಾಗಿ ಆರಿಸಿ ತನ್ನ ಬುಟ್ಟಿಯಲ್ಲಿ ತುಂಬಿಕೊಳ್ಳುವದನ್ನು ನೋಡಿದನು. ಬಲೆಗಾರನು ಬುಟ್ಟಿಯಲ್ಲಿ ಮೀನಗಳನ್ನು ತುಂಬುತ್ತಿರಲು ಬಳಿಯಲ್ಲಿರುವ ಗಿಡದ ಮೇಲೆ ಕುಳಿತ ಒಂದು ಗಿಡಗವು ತಟ್ಟನೆ ಎರಗಿ ಒಂದು ಮೀನವನ್ನು ಎತ್ತಿಕೊಂಡು ನಡೆಯಿತು.

ಗಿಡಗವು ಮೀನವನ್ನು ಎತ್ತಿಕೊಂಡುದೇ ತಡ, ಹತ್ತೆಂಟು ಕಾಗೆಗಳು ಅದನ್ನು ಸುತ್ತರಿದು 'ಕಾ! ಕಾ!' ಎಂದು ಗದ್ದಲವೆಬ್ಬಿಸಿದವು. ಗಿಡಗವು ಎಲ್ಲಿಹೋದರೂ ಅದರ ಬೆನ್ನುಬಿಡಲಿಲ್ಲ. ಬಾಯೊಳಗೆ ಹಿಡಿದ ಮೀನವನ್ನು ಎಲ್ಲಿಯಾದರೂ ಕೂತು ತಿನ್ನಬೇಕೆಂದರೆ ಗಿಡಗಕ್ಕೆ ಸಮಯವಿಲ್ಲ. ಕಾಗೆಗಳು 'ಕಾ! ಕಾ!' ಎಂದು ಬೆನ್ನುಹತ್ತಿಯೇ ಇದ್ದವು.

ಗಿಡಗವು ಬೇಸತ್ತು ಒಂದು ಗಿಡದ ಟೊಂಗೆಯ ಮೇಲೆ ಹೋಗಿ ಕುಳಿತುಕೊಳ್ಳಲು ಕಾಲೂರುವಷ್ಟರಲ್ಲಿ ಕಾಗೆಗಳು ಕಾ! ಕಾ! ಎಂದು ಚೀರಾಡಿ ಆ ಮೀನವನ್ನು ಸೆಳೆದುಕೊಳ್ಳುವದಕ್ಕೆ ಬಂದವು. ಗಿಡಗವು ಬೇಸತ್ತು ದೂರ ಹಾರಿಹೋಯಿತು. ಕಾಗೆಗಳು ಅಲ್ಲಿಯೂ ಅದರ ಬೆನ್ನು ಬಿಡಲೇ ಇಲ್ಲ. ಗಿಡಗಕ್ಕೆ ಮುಂದೆ ಏನು ಮಾಡಬೇಕೋ ಸೂಚಿಸಲಿಲ್ಲ. ಗಿಡಗವು ಮುಂದಿನ ಯೋಚನೆಯಲ್ಲಿ ಮಗ್ನವಾಗಿರುವಾಗ ತಟ್ಟನೆ ಬಾಯಿತೆರೆಯಲು ಮೀನವು ಕೆಳಗೆ ಬಿದ್ದುಹೋಯಿತು. ಕಾಗೆಗಳು ಗಿಡಗದ ಬೆನ್ನು ಬಿಟ್ಟು ಮೀನಕ್ಕೆ ಎರಗಿದವು ಗಿಡಗಕ್ಕೂ ಅಷ್ಟೇ ಸಾಕೆನ್ನಿಸಿತ್ತು. ಅದಕ್ಕೆ ಮೀನದ ಮೇಲಿನ ಮೋಹಕ್ಕಿಂತಲೂ ಕಾಗೆಗಳ ಕಾಟವೇ ಮಿಗಿಲಾಗಿತ್ತು. ಮೀನವನ್ನು ದೂರ ಎಸೆದುಬಿಟ್ಟರೆ ತಾನು ಈ ಕಾಗೆಗಳ ಕಾಟದೊಳಗಿಂದ ಬಿಡುಗಡೆ ಹೊಂದುವೆನೆಂದು ಗೊತ್ತಾಗಿದ್ದರೆ ಗಿಡಗವು ಆಗಲೇ ಮೀನವನ್ನು ಚಲ್ಲಿಬಿಡುತ್ತಿತ್ತು. ಆದರೆ ಆ ಯುಕ್ತಿಯು ಅದಕ್ಕೆ ಸೂಚಿಸಿರಲಿಲ್ಲ. ದೈವಯೋಗದಿಂದಲೇ ಅದರ ಬಾಯೊಳಗಿನ ಮೀನವು ಕೆಳಗೆಬಿದ್ದಿತು. ಅಂತೂ ಗಿಡಗಕ್ಕೆ ಕಾಗೆಗಳ ಕಾಟವು ನಿರಾಯಾಸವಾಗಿ ತಪ್ಪಿದಂತಾಯಿತು.

ಅವಧೂತನು ಇದನ್ನೆಲ್ಲ ನೋಡಿದನು—"ಆಹಾ! ಮೀನದ ಮೋಹದಲ್ಲಿ ಸಿಲುಕಿರುವ ವರೆಗೆ ಗಿಡಗವು ಎಷ್ಟು ಕಷ್ಟಪಡಬೇಕಾಯಿತು? ಅದೇ ಮೀನವನ್ನು

ಚಲ್ಲಿದ ಬಳಿಕ ಅದರ ಮನಸ್ಸಿಗೆ ಎಷ್ಟು ಸಮಾಧಾನವಾಗಿದ್ದೀತು. ಗಿಡಗವೇ ನನಗೆ ನೀನೊಬ್ಬ ಪರಮಗುರುವು. ಪ್ರಪಂಚದ ಮೋಹದಲ್ಲಿ ಸಿಲುಕಿದ ಮಾನವನೂ ಕೂಡ ಇದೇ ರೀತಿ ತುಂಬಾ ತಾಪತ್ರಯಗಳಿಗೆ ಒಳಗಾಗಿರುವನು. ಎಂದು ಈ ಪ್ರಪಂಚದ ಮೋಹವನ್ನು ತೊರೆದು ಬಿಡುವನೋ ಅಂದು ಮನುಷ್ಯನು ನಿಶ್ಚಿಂತನಾಗಿ ಪರಮಸುಖಿಯಾಗುವನು. " ಎನ್ನುತ್ತ ಮುಂದೆ ನಡೆದನು.

ತುಸು ಮುಂದಕ್ಕೆ ಹೋಗುವಷ್ಟರಲ್ಲಿ ಒಂದು ಗಿಡದ ಮೇಲೆ ಒಬ್ಬ ಕೊರವನು ಕಂಬಳಿಯನ್ನು ಮುಚ್ಚಿಕೊಂಡು 'ಉಫ್, ಉಫ್' ಎಂದು ಊದುತ್ತ ಗಿಡದ ತೊಪ್ಪಲದಿಂದ ಬಡಿಯುತ್ತ ಜೇನಿನ ಹೆರೆಯನ್ನು ಬಿಡಿಸುತ್ತಿದ್ದನು. ಸಾವಿರಾರು ಜೇನುನೊಣಗಳು ಅವನನ್ನು ಮುತ್ತಿದ್ದವು. ಸಾವಿರಾರು ನೊಣಗಳು 'ಭೊಂವ್' ಎಂದು ದನಿಮಾಡುತ್ತ ಹಾರಾಡುತ್ತಿದ್ದವು. ಕೊರವನು ಒಂದೆರಡು ಗಳಿಗೆ ಶ್ರಮಪಟ್ಟು ಜೇನು ಬಿಡಿಸಿಕೊಂಡು ಬಂದು ಪಾತ್ರೆಯೊಳಗಿಟ್ಟುಕೊಂಡು ಹೊರಟು ನಡೆದನು. ನೊಣಗಳು ನಿರಾಧಾರವಾಗಿ 'ಭೊಂವ್!' ಎಂದು ದನಿ ಮಾಡುತ್ತ ಹಾರಾಡತೊಡಗಿದವು. ಕ್ಷಣಹೊತ್ತು ಆ ತಮ್ಮ ಹುಟ್ಟಿನ ಸ್ಥಳದಲ್ಲಿ ಹೋಗಿ ಕೂಡ್ರುವವು; ಮತ್ತೆ ಹಾರಾಡುವವು.

ಅವಧೂತನು ಇದನ್ನು ನೋಡಿ ಮನಸ್ಸಿನಲ್ಲಿ "ನನಗೆ ಈ ಜೇನುನೊಣಗಳು ಹೇಳುವ ಉಪದೇಶವು ತುಂಬಾ ಗ್ರಾಹ್ಯವಾಗಿದೆ. ಬಹು ದಿನಗಳಿಂದಲೂ ಬಿಸಿಲು-ಮಳೆಗಳನೆಣಿಕೆಗೊಳ್ಳದೆ ಗಿಡದಿಂದ ಗಿಡಕ್ಕೆ ಅಲೆದು ಹೂವು ಹೂವು ಹುಡುಕಿ ಕೂಡಿಸಿದ ತುಪ್ಪವೆಲ್ಲಾ ಗಳಿಗೆಮಾತ್ರದಲ್ಲಿ ಗೊರವನ ಪಾಲಾಯಿತು. ಬಹು ದಿನಗಳ ಸಂಗ್ರಹವಾದ ತುಪ್ಪವು ಹೋದರೂ ಹೋಗಲಿ, ಉಳಿಯುವದಕ್ಕೆ ಮನೆಯಾದರೂ ಉಳಿಯಿತೇ? ಅದೂ ಇಲ್ಲ. ಸಾವಿರಾರು ತತ್ತಿಗಳು ಹಾಳಾದವು! ಸಾವಿರಾರು ಹುಳಗಳನ್ನು ಗೊರವನು ಬಡಿದು ಕೊಂದನು! ಇವಕ್ಕೆಲ್ಲಾ ಕಾರಣವೇನು? ಜೇನುನೊಣಗಳು ಹುಟ್ಟಿನಲ್ಲಿ ತುಪ್ಪವನ್ನು ಸಂಗ್ರಹಿಸದಿದ್ದರೆ ಗೊರವನು ಅವುಗಳನ್ನು ಯಾಕೆ ಪೀಡಿಸುತ್ತಿದ್ದನು? ಅವುಗಳ ಮನೆಯನ್ನೇಕೆ ಕೆಡಿಸುತ್ತಿದ್ದನು? ಜೇನುನೊಣಗಳು ಮುಂದೆ ಬೇಕು, ಮುಂದೆ ಬೇಕು, ಎಂಬ ಆಶೆಯಿಂದ ಸಂಗ್ರಹಿಸಿಟ್ಟಿದ್ದರಿಂದಲ್ಲೇ ಅವು ಈ ಪರಿಯ ಕಷ್ಟಕ್ಕೆ ಗುರಿಯಾದವು. ನಾನು ಇವುಗಳಿಂದ ಈ ಇನ್ನೊಂದು ಮಾತನ್ನು ಕಲಿತುಕೊಂಡು ಇವುಗಳನ್ನು ನನ್ನ ಎರಡನೆಯ ಗುರುಗಳಾಗಿ ಎಣಿಸುವೆನು. " ಎನ್ನುತ್ತ ಮುಂದೆ ಸಾಗಿದನು.

ಸಾ॥ **ಧನಕನಕದೊಡವೆಗಳು ಮನೆಮಾರು ಸತಿಸುತರು ।**
**ಮನವನಾಕ್ರಮಿಸಿರಲು ನರನೆ ॥**
**ನಿನಗೆಂತು ದೊರೆವುದಾ ಘನಶಾಂತಿಸೌಖ್ಯವು ।**
**ಮನದೆ ನೀನೆಡೆಗೊಡದಿರವಕೆ ॥ ೧ ॥**

## ೮. ಹದ್ದು ಕಾಗೆಗಳ ಜಾಣತನ.



ದುರ್ಗಾಪುರದಲ್ಲಿ ಒಬ್ಬ ವೈದಿಕರಿದ್ದರು. ಕುಲಕರ್ಮದ ಬಾಬುಗಳು ವಿಶೇಷವಾಗಿರದಿದ್ದರೂ ಅವರ ಉತ್ಪನ್ನವು ಎಲ್ಲರಿಗಿಂತ ಮಿಗಿಲಾಗಿದ್ದಿತು. ಅವರು ಕುಲವಿದ್ಯೆಯಲ್ಲಿ ಕುಶಲರಾಗಿರದಿದ್ದರೂ ಜನರಲ್ಲಿ ಜಾಣರೆಂದು ಹೆಸರಾಗಿದ್ದರು. ಊರಲ್ಲಿ ನೆರೆಯೂರಲ್ಲಿ ಎಲ್ಲಿ ಏನು ಕಲಹವುಂಟಾಗಿದ್ದರೂ ಅಲ್ಲಿ ವೈದಿಕರು ಮೊದಲು ಬಂದಿರುವರು. ಮಧ್ಯಸ್ಥಿಕೆಗೆ ಅವರೇ ಮುಂದೆ. ಯಾರು ಮಾತಾಡುತ್ತಿದ್ದರೂ ನಡುವೆ ತಮ್ಮವೆರಡು ಅಕ್ಕಿಯಕಾಳುಗಳನ್ನು ಬೀರಿದರೆಂದೇ ತಿಳಿಯಬೇಕು. ಪಕ್ಷಪರಪಕ್ಷಗಳಲ್ಲಿ ಹಣಕಾಸುಗಳುಳ್ಳವರನ್ನು ವೈದಿಕರು ಮೊದಲು ಎತ್ತಿ ಹಿಡಿಯುವರು. ನಾಲ್ಕಾರು ಸುಭಾಷಿತ ಶ್ಲೋಕಗಳನ್ನು ನಡುನಡುವೆ ಎತ್ತಿ ಆಡುವರು. ಪುರಾಣೇತಿಹಾಸಗಳಿಂದ ಉದಾಹರಣೆಗಳನ್ನು ಹೇಳುವರು. ಅಧ್ಯಾತ್ಮರಾಮಾಯಣದೊಳಗಿನ ಒಂದೊಂದು ಶ್ಲೋಕಗಳನ್ನು ಹರಿದು ತೆರಿದು ನುಡಿದು ಅವುಗಳಿಗೆಲ್ಲಾ ತಮ್ಮ ಪ್ರಸಂಗಕ್ಕೆ ಅನುಕೂಲವಾದ ಟೀಕೆಟಿಪ್ಪಣಿಗಳನ್ನು ಸೇರಿಸಿ ಮಾತಾಡುವರು. ವಿರುದ್ಧ ವಾದಿಸುವವರಿಗೆ ಒಮ್ಮೊಮ್ಮೆ ನಯತೋರಿಸುವರು. ಒಮ್ಮೊಮ್ಮೆ ಭಯತೋರಿಸುವರು. ಕೊನೆಗೆ ತಾನು ನೋಡಿದ ಮೊಲಕ್ಕೆ ಮೂರೇ ಕಾಲಿತ್ತೆಂದು ಇತ್ತಂಡ ವಾದ ಹೂಡಿ ನ್ಯಾಯವನ್ನು ತಮ್ಮಂತೆ ಮಾಡಿಕೊಳ್ಳುವದಕ್ಕೂ ಹಿಂದೆ ಮುಂದೆ ನೋಡರು. ಈ ನ್ಯಾಯನಿರ್ಣಯದಿಂದಲೇ ಬಗೆ ಹರಿದು ವ್ಯಾಜ್ಯವು ಕೊನೆಗಂಡರೆ ಒಳ್ಳೆಯದು; ಇಲ್ಲವಾದರೆ ಅವರಲ್ಲಿ ಒಬ್ಬನನ್ನು ಹುರಿದುಂಬಿಸಿ ನ್ಯಾಯಕ್ಕೆ ಕೋರ್ಟು ಕಚೇರಿಗಳನ್ನು ಕಾಣಿಸುವರು.

ಕೋರ್ಟು ಕಚೇರಿಗಳಲ್ಲಿ ವೈದಿಕರ "**ವಜನ**" ಬಹಳ. ಶಿಬ್ಬಂದಿಯವನ ಮೊದಲುಗೊಂಡು, ತಹಸೀಲ್ದಾರ ಮುನಸೂಫರ ವರೆಗಿನವರೆಲ್ಲಾ ವೈದಿಕರನ್ನು ಬಲ್ಲರು. ಅವರಲ್ಲಿ ಎಲೆಯಡಿಕೆಯಿದೆ, ನಸ್ಯವಿದೆ, ಬೀಡಿ ಸಿಗರೇಟುಗಳೂ ಉಂಟು. ಯಾರಿಗೆ ಯಾವದು ಬೇಕೋ ಅವನ್ನೆಲ್ಲಾ ಇವರು ಕೊಡಬಲ್ಲರು. ಎಲೆ ಅಡಿಕೆ ಪಲ್ಲೆಕಾಯಿಗಳ ಸರಬರಾಯಿಗಳನ್ನು ಒದಗಿಸಿ ಕೊಡುವದರಲ್ಲಿ ದುರ್ಗಾಪುರದ ಮಹಲಿನಲ್ಲಿ ವೈದಿಕರಿಗೆ ಸಮಾನ ದಕ್ಷನು ಇನ್ನೊಬ್ಬನಿಲ್ಲವೆಂದು ಎಲ್ಲರೂ ತಿಳಿದಿದ್ದರು. ತಹಸೀಲ್ದಾರರಿಗೆ ಅಡಿಗೆಯವನು ಬೇಕಾಗಿದ್ದರೂ ನೀರಿನವನ ಕೊರತೆಯಿದ್ದರೂ ವೈದಿಕರಿಗೆ ಚೀಟಿಯು ಹೊರಟಿತೆಂದೇ ತಿಳಿಯಬೇಕು. ಹೀಗಿರುವದರಿಂದ ಕೋರ್ಟು ಕಚೇರಿಗಳೊಳಗಿನ ವ್ಯವಹಾರಗಳ ಗುಟ್ಟನ್ನು ವೈದಿಕರು ಚೆನ್ನಾಗಿ ಅರಿತಿದ್ದರು. ಅವರು ಕೈ ಹಾಕಿದ ನ್ಯಾಯಗಳನ್ನು ಹಿಡಿಯಲಿಕ್ಕೆ ವಕೀಲರೂ ಹಿಂದೆ ಮುಂದೆ ನೋಡುತ್ತಿದ್ದರು. ಯಾಕಂದರೆ ವಕೀಲರ ರುಸುಮಿನ ರಕಮು, ವೆಚ್ಚಕ್ಕೆಂದು ಕೊಡಬೇಕಾಗ ಹಣವೂ ವೈದಿಕರ ಕೈಯಿಂದಲೇ ಹಾಯ್ದು ಹೋಗಬೇಕು. ವೈದಿಕರ ಕೈಯಲ್ಲಿ ಸುವರ್ಣಚುಂಬಕ ಗುಣ

ವಿದ್ದುದರಿಂದಲೂ ಬಾಯಿಯಲ್ಲಿ ಸಕ್ಕರೆಯು ಚೀಲವಿದ್ದುದರಿಂದಲೂ ಕುಳಗಳಿಂದ ಬಂದ ಇಂಥ ಹಣದಲ್ಲಿ ಅರ್ಧವೂ ಕೂಡ ವಕೀಲರನ್ನು ಸೇರುತ್ತಿರಲಿಲ್ಲ. ಸಣ್ಣ ಪುಟ ವ್ಯಾಜ್ಯಗಳಲ್ಲಿ ಕರ್ಣಿಕ-ಮುನಶಿಗಳ ಹೆಸರಿನಿಂದಲೂ ದೊಡ್ಡ ವ್ಯವಹಾರಗಳಲ್ಲಿ ಅಮಲ್ದಾರರ ಹೆಸರಿನಿಂದಲೂ ಪ್ರಸಂಗೋಚಿತವಾದ ರಕಮು ವೈದಿಕರ ಜಕ್ಕಣದಲ್ಲಿ ಬೀಳುವದು. ಇವೆಲ್ಲಾ ಅವರ ಉತ್ಪನ್ನದ ಸಣ್ಣ ಪುಟ್ಟ ಬಾಬುಗಳು.

ಇನ್ನೂ ಒಂದು ಮಹತ್ವದ ಬಾಜಿನಿಂದ ವೈದಿಕರು ಹಣ ಗಳಿಸುತ್ತಿದ್ದರು. ಅವರ ಕೈಯಲ್ಲಿ ಹಿಂದೆ ಹೇಳಿದ ಸುವರ್ಣಚುಂಬಕ ಗುಣವೊಂದೇ ಅಲ್ಲದೆ ಇನ್ನೂ ಒಂದು ಗುಣವಿದ್ದಿತು. ಹೇಗೆ ಮಲಗಿಸಿದರೂ ತಾಸಾಗಿ ಎದ್ದು ಕೂಡುವ ಹುಡುಗರ ಆಟದ ಗೊಂಬೆಯಂತೆ ವೈದಿಕರ ಕೈಯು ಯಾವಾಗಲೂ ಮೇಲ್ಮುಖವಾಗಿಯೇ ಇರುವದು. ಕೊಡು ಎಂಬದು ಕುಲಾಚಾರವೇ ಅಲ್ಲವೆಂಬದು ವೈದಿಕರ ಉತ್ಪನ್ನದ ಮೂಲಮಂತ್ರ! ಅವರ ಹತ್ತರ ಹಾಯ್ದವರೆಲ್ಲರೂ ತೆತ್ತುಬಂದವರೇ! ನಾಳೆ ಕೊಡುವೆನೆಂದು ನಾಲ್ಕು, ಕೈಗಡವೆಂದು ಹತ್ತು, ಅಡಚಣಿಯಿರುವದೆಂದು ನಾಲ್ವತ್ತು, ಸಾಲವೆಂದು ನಾಲ್ಕುನೂರು ಹೀಗೆ ವೈದಿಕರ ವ್ಯವಹಾರವು ದಿನದಿನಕ್ಕೆ ಬೆಳೆಯುತ್ತ ಹೋಗುವದು. ಕೊನೆಗೆ ಒಂದು ದಿನ, ಇಲ್ಲದ್ದೊಂದು ನೆವನದಿಂದ ವೈದಿಕರು ಮಾತಿಗೆ ಮಾತು ಬೆಳಿಸಿ ಜಗಳ ತೆಗೆಯುವರು. ಸೈ. ತೀರಿತು. ಮಾತಿನ ಕಲಹಕ್ಕೂ ಕೈಯಲ್ಲಿ ಕೊಟ್ಟ ಗಂಟಿಗೂ ಸಂಬಂಧವೇನೆಂದು ಸಾಲ ಕೊಟ್ಟವನು ತಿಳಿದಿರಬೇಕು. ವೈದಿಕರಿಗೆ ಮಾತ್ರ ಹಾಗಲ್ಲ. ಕೊಟ್ಟವರು ಕೇಳಲಿಕ್ಕೆ ಬರಬಾರದೆಂಬದೂ ಬಂದರೂ ತಾವು ಕೊಡಬಾರದೆಂಬದೂ ವೈದಿಕರ ಕಲಹದ ಉದ್ದೇಶವಾಗಿರುವದು. ಅಂದಮೇಲೆ ಸಾಲಕೊಟ್ಟವರಿಗೆ ತಿರಿಗಿ ಮುಟ್ಟುವ ಸಂಭವವೆಲ್ಲಿ? ಹಣವನ್ನು ಎತ್ತಿ ಹಾಕಿದ ಸಂಗತಿಯನ್ನು ಅವರು ಜನರ ಮುಂದೆ ಹೇಳಿದರೆ ಅದನ್ನವರು ನಂಬಬಾರದೆಂದು ವೈದಿಕರು ಅವರ ವಿರುದ್ಧವಾಗಿ ದೊಡ್ಡದೊಂದು ಕಲ್ಪಿತ ಇತಿಹಾಸವನ್ನೇ ರಚಿಸುವರು. ಕಂಡಕಂಡವರ ಮುಂದೆ ಏನಾದರೊಂದು ಮಾತಿನ ಸಂದರ್ಭವನ್ನು ಎತ್ತಿ ಇಂತಹದೊಂದು ಇತಿಹಾಸವನ್ನು ಹೇಳಿಯೇ ತೀರಬೇಕು. ಅವರಿಗೆ ತಾನು ಅನಂತ ಉಪಕಾರ ಮಾಡಿರುವೆನೆಂದೂ ಈಗ ತಮ್ಮ ಕೆಲಸವಾಯಿತೆಂದು ವಿರುದ್ಧವಾಗಿ ನಡೆಯುವರೆಂದೂ ಪ್ರತಿಪಾದಿಸುವರು. ತಮ್ಮ ದೋಷಗಳು ಬೈಲಿಗೆ ಬಾರದಿರುವದಕ್ಕೆಂದು ಸಾಲಕೊಟ್ಟವರಲ್ಲಿ ಅಲ್ಲದ ಆರೋಪಗಳನ್ನು ಹೊರಿಸುವರು. ಒಟ್ಟಿನಮೇಲೆ ಕೊಂಡದ್ದನ್ನು ಕೊಡುವ ಚಟವನ್ನು ವೈದಿಕರು ಹುಟ್ಟಾ ಅರಿಯರು! ಅವರ ಸವಿಮಾತಿಗೆ ಮರುಳಾಗಿ ನಂಬಗಸ್ಥರೆಂದು ನಂಬಿ ಹಣ ಕಾಸುಗಳನ್ನೂ ಸರಕು ಸಾಮಾನುಗಳನ್ನೂ ಅವರಲ್ಲಿ ಇಟ್ಟರಂತೂ ತೀರಿತು. ಅವು ಕೋಳಿನುಂಗಿದ ಕಲ್ಲೆಂದೇ ತಿಳಿಯಬೇಕು. ನೆರೆಹೊರೆಯ ಶ್ರೀಮಂತರೆನಿಸುವವರು ಇನ್ನೂ ಹುಲ್ಲಿನ ಗುಡಿಸಲಿನಲ್ಲಿರುವಾಗ ವೈದಿಕರ ಮೇಲುಪ್ಪರಿಗೆಯು ಕಾಜುಕನ್ನಡಿ ಕಳಸಗಳಿಂದ ವಿರಾಜಮಾನವಾಯಿತು.

ಒಂದು ದಿನ ಒಬ್ಬ ಸನ್ಯಾಸಿಯು ತನ್ನ ಶಿಷ್ಯನೊಡನೆ ಆ ಊರ ಮಾರ್ಗವಾಗಿ ಸಂಚಾರಕ್ಕೆ ಹೊರಟಿರುವಾಗ ಶಿಷ್ಯನು ವೈದಿಕರ ಮನೆಯನ್ನು ನೋಡಿ ಅವರ ಇತಿಹಾಸವನ್ನೆಲ್ಲ ವಿವರಿಸಿ ಅವರ ಜಾಣತನವನ್ನು ಹೊಗಳಿದನು. ಆಗ ಸನ್ಯಾಸಿಯು— "ತಮ್ಮಾ, ಇಂತಹ ಜಾಣತನವು ಕೇವಲ ನಿಷ್ಪ್ರಯೋಜಕವಾದುದು. ಇದು ಹದ್ದು ಕಾಗೆಗಳ ಜಾಣತನದಂತೆಯೇ ಸರಿ. ಎಲ್ಲ ಪಕ್ಷಿಗಳಲ್ಲಿ ಕಾಗೆಯು ತುಂಬಾ ಕಪಟಿ! ಅದರ ಕಣ್ಣು ಬಹು ಸೂಕ್ಷ್ಮ! ಬುದ್ಧಿ ಚುರುಕು! ತಿಂಬುಂಬುವ ಪದಾರ್ಥಗಳು ಎಲ್ಲಿ ಎಷ್ಟು ಮರೆಯಾಗಿದ್ದರೂ ಕಾಗೆಯು ಮೊದಲು ಅದನ್ನು ಕಂಡುಕೊಳ್ಳುವದು. ಅದು ಎಂದೂ ಬಲೆಯೊಳಗೆ ಸಿಕ್ಕು ಬೀಳುವದಿಲ್ಲ. ಆದರೆ ಅದರ ಈ ಎಲ್ಲ ಬಗೆಯು ಎಚ್ಚರಿಕೆ ಜಾಣ್ಮೆಗಳಿಗೆ ಫಲವೇನು! ತಿಪ್ಪೆಯೊಳಗಿನ ಕೊಳಕು ಕಸಕಡ್ಡಿಗಳೂ ಸತ್ತು ಬಿದ್ದು ಕೊಳೆತು ನಾರುವ ಪ್ರಾಣಿಶರೀರಗಳೂ ಅದರ ಪ್ರೀತಿಯ ಆಹಾರಗಳು! ಅದರ ಜಾಣತನವೆಲ್ಲಾ ಇಂಥವುಗಳನ್ನು ದೊರಕಿಸುವದರಲ್ಲಿಯೇ ವೆಚ್ಚವಾಗುವದು. ಅದರ ಇಡೀ ಆಯುಷ್ಯವು ಇದರಲ್ಲಿಯೇ ಸವೆಯುವದು. ಈ ವೈದಿಕರ ಪ್ರಾರಬ್ಧವೂ ಇಷ್ಟೇ ಸರಿ. ಅವರು ಮುಂದಿನ ಜನ್ಮದಲ್ಲಿ ಕಾಗೆಯಾಗಿ ಹುಟ್ಟಿ ತಿಪ್ಪೆಯ ಮೇಲೆ ಬಾಳುವೆ ಮಾಡುವರು. ಅದರಂತೆ ಹದ್ದು ಆಕಾಶದಲ್ಲಿ ಎಲ್ಲ ಪಕ್ಷಿಗಳಿಗಿಂತ ಹೆಚ್ಚು ದೂರ ಹಾರಬಲ್ಲದು. ಆದರೆ ಅದರ ದೃಷ್ಟಿಯು ಮಾತ್ರ ಯಾವಾಗಲೂ ಭೂಮಿಯ ಕಡೆಗೇ ಇರುವದು. ಆಕಾಶದಲ್ಲಿ ಬಹು ದೂರದಲ್ಲಿ ಹಾರಾಡುತ್ತಿರುವಾಗ ಹದ್ದಿನ ದೃಷ್ಟಿಯು ಭೂಮಿಯ ಮೇಲೆ ಎಲ್ಲಿ ದನಕರುಗಳು ಸತ್ತು ಬಿದ್ದಿರುವವೆಂಬದನ್ನು ನೋಡುವದರಲ್ಲಿಯೇ ಆಸಕ್ತವಾಗಿರುವದು. ಅದರ ಘ್ರಾಣೇಂದ್ರಿಯವು ಸತ್ತ ಪ್ರಾಣಿಶರೀರಗಳು ಕೊಳೆತು ನಾರುವ ದುರ್ಗಂಧವನ್ನು ಪರೀಕ್ಷಿಸುತ್ತಿರುವದು! ತಮ್ಮಾ, ಕಾಗೆಯ ಜಾಣತನವೂ ಹದ್ದಿನ ಆಕಾಶದಲ್ಲಿ ಹಾರುವ ಶಕ್ತಿಯೂ ತಿಪ್ಪೆಯ ಕಸಕಡ್ಡಿಗಳನ್ನೂ ಕೊಳೆತು ನಾರುವ ಪ್ರಾಣಿಶರೀರಗಳನ್ನೂ ದೊರಕಿಸುವದಕ್ಕಷ್ಟೇ ಉಪಯೋಗವಾಗುವಂತೆ ದುಷ್ಟರಲ್ಲಿರುವ ಜಾಣತನವು ಕೂಡ ಪ್ರಂಪಚದಲ್ಲಿ ಕಸಕಡ್ಡಿಗಳಂತಿರುವ ಹಣಕಾಸುಗಳನ್ನೂ ಅಧಿಕಾರ ವೈಭವಗಳನ್ನೂ ಹೊಲಸು ಖಾದ್ಯಗಳನ್ನೂ ದೊರಕಿಸುವದಕ್ಕಾಗಿಯೇ ಉಪಯೋಗವಾಗುವವು. ಅಲ್ಲದೆ ಅವುಗಳಿಂದ ಸಜ್ಜನ ಸಹಾಯವಾಗಲಿ ಸನ್ಮಾರ್ಗಸಾಧನೆಯಾಗಲಿ ಎಷ್ಟು ಮಾತ್ರವೂ ಆಗಲಾರದು. ಆ ಜಾಣ್ಮೆಯ ಸದ್ವಿನಿಯೋಗವಾಗಲಾರದು" ಎಂದು ಮುಂದೆ ನಡೆದನು.

ಸಾ॥ **ಹದ್ದು ಕಾಗೆಗಳು ತಿಪ್ಪೆಯ ನುಂಡು ಬೆಳೆವಂತೆ।**
**ಬುದ್ಧಿಗೇಡಿಗಳು ಪರಧನವ ॥**
**ಮುದ್ದುಮಾಟಗಳಿಂದ ಕಪಟ ಕೃತ್ರಿಮದಿಂದ।**
**ಕದ್ದು ಬಾಳುವರೈ ಜಗದೊಳಗೆ ॥ ೧ ॥**

# ಭಗವತೀ ಶ್ರೀ ಶಾರದಾ ದೇವಿಯವರು.

(ಶ್ರೀ ರಾಮಕೃಷ್ಣ ಪರಮಹಂಸರ ಸಹಧರ್ಮಿಣೀ)



ಜನನ : ೧೮೫೩.　　　　ನಿರ್ಯಾಣ : ೨೧-೭-೨೦

A perfect woman, nobly plann'd
　　To warn, to comfort, and command ;
And yet a Spirit still, and bright
　　With something of Angelic light ;

—*W. Wordsworth.*

## ೯. ಶ್ರೀಶಾರದಾ ದೇವಿಯವರು.



ಶ್ರೀ ರಾಮಕೃಷ್ಣ ಪರಮಹಂಸರು ಬಾಲ್ಯದಿಂದಲೂ ವಿಚಿತ್ರವಾದ ದೈವೀ ಭಾವನೆಯನ್ನು ವ್ಯಕ್ತಪಡಿಸುತ್ತಿದ್ದರು. ತಾರುಣ್ಯದಲ್ಲಿಯೂ ಅವರ ಆ ಭಾವನೆ ಕಡಿಮೆಯಾಗಿರಲಿಲ್ಲ. ಏಕಾಂತದಲ್ಲಿ ಕುಳಿತು ದೇವತಾರಾಧನೆ ಮಾಡುವದು, ಶ್ಮಶಾನಗಳಲ್ಲಿ ಅಲೆಯುವದು, ಪ್ರಾಪಂಚಿಕ ವಿಚಾರಗಳಲ್ಲೆಲ್ಲಾ ಔದಾಸೀನ್ಯವನ್ನು ತೋರಿಸುವದು, ಮುಂತಾದ ವಿಲಕ್ಷಣ ಆಚಾರಗಳನ್ನು ನೋಡಿ ಅವರ ತಾಯಿ ಚಂದ್ರಾದೇವಿಯವರು ಚಿಂತಾಕುಲರಾದರು. ಹ್ಯಾಗಾದರೂ ಮಾಡಿ ಮಗನ ಮದುವೆ ಮಾಡಿಬಿಡಬೇಕೆಂದು ಅವರು ಆಗ್ರಹಹಿಡಿದರು. ಆದರೆ ಪರಮಹಂಸರ ಈ ತೆರದ ಪ್ರಕೃತಿಯನ್ನು ಕಂಡವರು ಹೆಣ್ಣು ಕೊಡಲು ಸಮ್ಮತಿಸುವ್ರದು ಹೇಗೆ? ಆದುದರಿಂದ ಮಗನಿಗೆ ‘ ಹುಚ್ಚು ಬಿಡದೆ ಮದುವೆಯಾಗದು, ಮದುವೆಯಾಗದೆ ಹುಚ್ಚು ಬಿಡದು. ’ ಮುಂದೇನು ಗತಿಯೆಂದು ಅವರು ಚಿಂತಿಸುತ್ತಿದ್ದರು. ಅನೇಕ ಕಡೆಗಳಲ್ಲಿ ಕನ್ಯೆಯನ್ನು ನೋಡಿ ಬಂದರು. ಆದರೂ ಒಂದಿಲ್ಲೊಂದು ಕಾರಣದಿಂದ ಅದು ಹೊಂದಿಕೆಯಾಗಲಿಲ್ಲ. ಇದನ್ನು ನೋಡಿ ಚಂದ್ರಾದೇವಿಯವರು ಹೆಚ್ಚು ಚಿಂತೆಗೊಳಗಾಗಿ ಕೊರಗತೊಡಗಿದರು. ಪರಮಹಂಸರಿಗೆ ಈ ಮಾತು ತಿಳಿಯದಿರಲಿಲ್ಲ. ಒಂದು ದಿನ ಅವರು ದೇವತಾರಾಧನೆಗೆ ಕುಳಿತಿರುವಾಗ ಒಮ್ಮಿಂದೊಮ್ಮೆ ಭಾವಾವಿಷ್ಟರಾಗಿ ತಾಯಿಯನ್ನು ಕರೆದು “ ಅಮ್ಮಾ, ಇಷ್ಟೇಕೆ ಚಿಂತಿಸುವುದು? ಜಯರಾಮವಾಡಿಯಲ್ಲಿ ಶ್ರೀರಾಮ ಮುಖ್ಯೋಪಾಧ್ಯಾಯನ ಮನೆಯಲ್ಲಿ ನಿಮ್ಮ ಸೊಸೆ ನಿಮ್ಮ ದಾರಿಯನ್ನು ನೋಡುತ್ತಲಿದ್ದಾಳೆ! ” ಎಂದು ನುಡಿದು ಗಹಗಹಿಸಿ ನಕ್ಕುಬಿಟ್ಟರು!

ಮುಂದೆ ಅದೇ ರೀತಿಯಾಗಿ ಜಯರಾಮವಾಡಿಗೆ ಹೋಗಿ ಶ್ರೀರಾಮ ಮುಖ್ಯೋಪಾಧ್ಯಾಯನನ್ನು ವಿಚಾರಿಸಲು ಅವನು ಶ್ರೀಶಾರದಾದೇವಿಯವರನ್ನು ಪರಮಹಂಸರಿಗೆ ಅರ್ಪಿಸಲು ಸಂತೋಷದಿಂದ ಸಮ್ಮತಿಸಿದರು. ಕೆಲವು ದಿವಸಗಳಲ್ಲಿಯೇ ವಿವಾಹ ಕಾರ್ಯವು ಕೊನೆಗಂಡಿತು. (೧೮೫೯).

ಮದುವೆಯಾದ ಬಳಿಕ ಕೆಲವು ದಿನಗಳವರೆಗೆ ಪರಮಹಂಸರು ತಮ್ಮ ಊರಲ್ಲಿಯೇ ತಾಯಿಯೊಡನೆ ಉಳಿದುಕೊಂಡರು. ಸಂಸಾರದ ಬಡತನವನ್ನು ಕಂಡು ಅವರು ಒಮ್ಮೊಮ್ಮೆ ಕಳವಳಪಡುವರು; ಮತ್ತೊಮ್ಮೆ ಆನಂದಪಡುವರು. ತಾಯಿಯಿಂದ ಅನುಮತಿಯನ್ನು ಪಡೆದುಕೊಂಡು ಅವರು ಪುನಃ ದಕ್ಷಿಣೇಶ್ವರಕ್ಕೆ ಬಂದು ದೇವಿಯ ಅರ್ಚನೆಯ ಕಾರ್ಯವನ್ನು ಸ್ವೀಕರಿಸಿದರು. ಮನೆಯನ್ನು ಮರೆತರು. ತಾಯಿಯ ಸ್ಮರಣೆಯೂ ಬರದಾಯಿತು. ಹೆಂಡತಿಯನ್ನಂತೂ ಸ್ಮರಿಸಲೇ ಇಲ್ಲ. ಅತ್ತಕಡೆಯ ಆಶೆಯೇ ಅಡಗಿ ಹೋದಂತೆ ತೋರಿತು. ಏಳೆಂಟು ವರುಷ ಕಾಲವನ್ನು ತಮ್ಮ ಇಷ್ಟಸಿದ್ಧಿಯಲ್ಲಿ ನಿರ್ವಿಕಾರ

ಚಿತ್ತದಿಂದ ಕಳೆದರು. ಆಗಾಗ ವ್ರತೋಪವಾಸಾದಿಗಳನ್ನು ಕೈಕೊಂಡು ಇಷ್ಟಸಾಧನೆ ಯಲ್ಲಿ ಮಗ್ನರಾಗಿರುತ್ತಿದ್ದರು. ೧೮೬೭ನೇ ಇಸ್ವಿಯಲ್ಲಿ ಅಂದರೆ ಮದುವೆಯಾಗಿ ೮ ವರು ಷಗಳು ಕಳೆದ ಬಳಿಕ ಅದೇನೋ ಒಂದು ವ್ಯಾಧಿಯಿಂದ ಬಳಲುತ್ತಿದ್ದ ಪರಮಹಂಸರು ತಿರುಗಿ ತಮ್ಮೂರಿಗೆ ಬಂದರು; ಅವರು ಬಹುದಿನಗಳ ತರುವಾಯ ತಿರುಗಿಬಂದುದನ್ನು ನೋಡಿ ಮನೆಯವರಿಗೂ ನೆರೆಹೊರೆಯವರಿಗೂ ಆನಂದವಾಯಿತು. ಅವರಿವರು ಜಯ ರಾಮವಾಡಿಗೆ ಆಳುಕಳುಹಿಸಿ ಶಾರದಾದೇವಿಯವರನ್ನು ಕರೆಯಿಸಬೇಕೆಂದು ಮಾತಾಡ ತೊಡಗಿದರು. ಪರಮಹಂಸರು ಈ ಮಾತು ಕೇಳಿದರೂ ಕೇಳದವರಂತೆಯೇ ಇದ್ದರು. ಕೊನೆಗೆ ಒಂದು ದಿನ ಶಾರದಾದೇವಿಯವರು ತವರ್ಮನೆಯಿಂದ ಕಾಮಾರಪುಕೂರಕ್ಕೆ ಬಂದರು.

ಆಗ ಶಾರದಾದೇವಿಯವರಿಗೆ ೧೪ ವರುಷಗಳು ತುಂಬಿದ್ದವು. ಮನೆಗೆ ಬಂದ ಪತ್ನಿ ಯನ್ನು ನೋಡಿ ಪರಮಹಂಸರು ಅವಳಿಗೆ ಪ್ರಾಪಂಚಿಕ ಕರ್ತವ್ಯಗಳನ್ನೆಲ್ಲಾ ಅರುಹಿ ದರು. ಪಾರಮಾರ್ಥಿಕ ಬೋಧೆಯಂತೂ ಸರ್ವದಾ ಪ್ರತ್ಯಕ್ಷವಾಗಿ ಅಪ್ರತ್ಯಕ್ಷವಾಗಿ ಕಾರ್ಯರೂಪದಿಂದ ನಡೆದೇ ಇದ್ದಿತು. ಪರಮೇಶ್ವರನಲ್ಲಿ ತನುಮನಧನಗಳನ್ನೆಲ್ಲಾ ಅರ್ಪಿಸಿಬಿಟ್ಟ ಪರಮಹಂಸರ ನಿಷ್ಕಾಮವೃತ್ತಿಯನ್ನು ಕಂಡು ಅವರ ಆ ದಿವ್ಯ ವಿಶುದ್ಧ ಪ್ರೇಮವನ್ನು ಅನುಭವಿಸಿ ಶಾರದಾದೇವಿಯವರು ಪತಿದೈವತವನ್ನು ಪರಮೇಶ್ವರನ ಪ್ರತಿ ನಿಧಿಯಾಗಿ ಆರಾಧಿಸತೊಡಗಿದರು.

ಪರಮಹಂಸರು ಆರೆಂಟು ತಿಂಗಳು ತಮ್ಮ ಊರಲ್ಲಿದ್ದು ತಿರುಗಿ ದಕ್ಷಿಣೇಶ್ವರಕ್ಕೆ ಬಂದುಬಿಟ್ಟರು. ಶಾರದಾದೇವಿಯವರನ್ನು ತವರ್ಮನೆಯವರು ಬಂದು ಕರೆದುಕೊಂಡು ಹೋದರು.

ಇತ್ತ ಪರಮಹಂಸರು ತೀರ್ಥಯಾತ್ರೆಗೆ ಹೊರಟಿದ್ದರು. ಅತ್ತ ಶಾರದಾದೇವಿ ಯವರು ಪತಿದೇವತೆಯು ಎಂದು ತನ್ನನ್ನು ಕರೆಯಿಸಿಕೊಳ್ಳುವನೋ ಎಂದು ಇದಿರು ನೋಡುತ್ತಿದ್ದರು. ಇರ ಇರುತ್ತ ನಾಲ್ಕು ವರುಷಗಳು ಕಳೆದುಹೋದವು. ಆದರೂ ಸ್ವಾಮಿಯವರ ಕರೆಯುವು ಬಾರದಿರುವುದನ್ನು ನೋಡಿ ಶಾರದಾದೇವಿಯವರು ದುಃಖಿತ ರಾದರು ಮೇಲಾಗಿ ಊರಲ್ಲಿ ಪರಮಹಂಸರು ಹುಚ್ಚರಾಗಿ ಬತ್ತಲೆ ಅಲೆಯುತ್ತಿರುವ ರೆಂಬ ಸುದ್ದಿ ಹುಟ್ಟಿತು. ಕೆರೆಗೆ ಹೋದಾಗಲೂ ಹೊಳೆಯ ಕರೆಯಲ್ಲಿಯೂ ನಾಲ್ವರು ಹೆಣ್ಣು ಮಕ್ಕಳು ಕೂಡಿದಲ್ಲೆಲ್ಲ ಇದೇ ಸುದ್ದಿ. "ಅಕ್ಕಾ, ಶಾರದೆಯ ಗಂಡನು ಹುಚ್ಚ ನಾಗಿರುವನಂತಲ್ಲೇ" ಎಂದು ಒಬ್ಬಳು ನುಡಿದರೆ 'ಹೇಳಿಕೇಳಿ ಹುಚ್ಚನಿಗೆ ಹೆಣು

ಕೊಟ್ಟಿದ್ದಾನೆ! ಹಡೆದ ತಂದೆಗೆ ಮೊದಲೇ ಈ ವಿಚಾರವಿರಬೇಕಿತ್ತು.' ಎಂದು ಮತ್ತೊಬ್ಬಳು ಟೀಕೆಮಾಡುವಳು. 'ಆದದ್ದಾಯಿತು, ಅವಳ ದೈವವೇ ಹಾಗಿತ್ತು' ಎಂದು ಮೂರನೆಯ ಮುದುಕಿಯು ಸಮಾಧಾನಪಡಿಸುವಳು. ಶಾರದಾದೇವಿಯವರು ಇವನ್ನೆಲ್ಲ ಕೇಳುತ್ತಿದ್ದರು. ಕೊನೆಗೆ ಒಂದು ದಿನ "ನಾನು ಇನ್ನು ಇಲ್ಲಿ ಇರುವದು ಸರಿಯಲ್ಲ. ಏನೇ ಆದರೂ—ಹುಚ್ಚರೇ ಆದರೂ—ಅವರೇ ನನಗೆ ಪರಮದೈವತವು. ನಾನು ಅವರ ಬಳಿಗೆ ಹೋಗಿಯೇ ತೀರಬೇಕು. ಅವರ ಬಳಿಯಲ್ಲಿದ್ದು ಸೇವೆಮಾಡಿಕೊಂಡು ಕಾಲ ಕಳೆಯುವೆನು" ಎಂದು, ತಂದೆಯ ಸಮ್ಮತಿಯನ್ನು ಕೇಳಿದಳು. ಧರ್ಮದಲ್ಲಿಯೇ ಪ್ರವೃತ್ತಿಯುಳ್ಳ ತಂದೆಯು ಮಗಳ ವಿಚಾರಗಳನ್ನು ಮನಃಪೂರ್ವಕವಾಗಿ ಸಮ್ಮತಿಸಿದನು. ಆಗ ಶಾರದಾದೇವಿಯವರ ಮೈಯಲ್ಲಿ ಚೆನ್ನಾಗಿರಲಿಲ್ಲ. ೧೮೭೨ನೇ ಇಸ್ವಿಯ ಮಧ್ಯಭಾಗದಲ್ಲಿ ಶ್ರೀರಾಮ ಮುಖ್ಯೋಪಾಧ್ಯಾಯನು ತಾನೇ ಮಗಳನ್ನು ಕರೆದುಕೊಂಡು ದಕ್ಷಿಣೇಶ್ವರಕ್ಕೆ ಬಂದನು.

ರೋಗಪೀಡಿತರಾದ ಶಾರದಾದೇವಿಯವರಿಗೆ ಸರಿಯಾಗಿ ಎದ್ದುನಿಲ್ಲಲು ಕೂಡ ಸಾಧ್ಯವಿರಲಿಲ್ಲ. ಇಂತಹ ಅವಸ್ಥೆಯಲ್ಲಿಯೂ ತನ್ನನ್ನು ಅನುಸರಿಸಿ ಬಂದಿರುವ ಪತ್ನಿಯನ್ನು ನೋಡಿ ಪರಮಹಂಸರ ಮನಸ್ಸು ಮರುಗಿತು. ಪರಮಹಂಸರು ತಾವೇ ಔಷಧೋಪಚಾರಗಳನ್ನು ಕೈಕೊಂಡರು. ನಾಲ್ಕಾರು ದಿನಗಳವರೆಗೆ ಹಗಲಿರುಳು ಪಥ್ಯಪಾನಗಳನ್ನು ಸರಿಯಾಗಿ ನೋಡಿಕೊಳ್ಳಲು ಶಾರದಾದೇವಿಯವರ ಬೇನೆಯು ಹಿಮ್ಮೆಟ್ಟಿತು. ಪತಿದೇವತೆಯನ್ನು ಕಂಡಕೂಡಲೇ ಬೇನೆಯು ಅರೆವಾಸಿ ವಾಸಿಯಾಗಿತ್ತು. ಅವರ ಆದರ ಉಪಚಾರಗಳಿಂದಲೂ ಔಷಧ ಪಥ್ಯಗಳಿಂದಲೂ ದೇವಿಯವರು ಆರೋಗ್ಯವನ್ನು ಹೊಂದಿದರು. ತಂದೆಯು ತಮ್ಮೂರಿಗೆ ತಿರುಗಿಹೋದನು. ದೇವಿಯವರಿಗೆ ಅಂದಿನಿಂದ ದಕ್ಷಿಣೇಶ್ವರವೇ ಮನೆಯಾಯಿತು.

ಆ ಪತಿಪತ್ನಿಯರು ಒಂದೇ ಕಡೆಯಲ್ಲಿಯೇ ಇರುತ್ತಿದ್ದರೂ ಯಾವ ರೀತಿಯಿಂದಲೂ ಅವರ ಬ್ರಹ್ಮಚರ್ಯಕ್ಕೆ ಎಳ್ಳಷ್ಟು ಕೊರತೆ ಬಂದಿರಲಿಲ್ಲ! ಇದೀಗ ನಾವು ಹೇಳಬೇಕಾದ ವಿಷಯ! ಕೇಳಬೇಕಾದ ಮಾತು! ಕಲಿಯಬೇಕಾದ ಸಂಗತಿ!

ಪರಮಹಂಸರ ಬಳಿಯಲ್ಲಿ ಒಬ್ಬ ಭೈರವಿಯು ವಾಸವಾಗಿದ್ದಳು. ಅವಳಿಗೆ ಈ ದಾಂಪತ್ಯಜೀವನದ ರಹಸ್ಯವು ಸರಿಯಾಗಿ ತಿಳಿದಿರಲಿಲ್ಲ. ಪರಮಹಂಸರ ಬ್ರಹ್ಮಚರ್ಯದ ವಿಷಯವಾಗಿ ಒಮ್ಮೆ ಅವಳಿಗೆ ಸಂಶಯವುಂಟಾಯಿತು. ಮುಂದೆ ಕೆಲವು ದಿನಗಳು ಕಳೆದ ಮೇಲೆ ಇದು ಕೇವಲ ತನ್ನ ಮಾನಸಿಕ ದೋಷವೆಂಬದು ಅವಳಿಗೆ ತಿಳಿದುಬರಲು ಅವಳು

ಪರಮಹಂಸರ ಕ್ಷಮೆಯನ್ನು ಬೇಡಿಕೊಂಡಳು. ಪರಮಹಂಸರ ಶಿಷ್ಯರಲ್ಲಿಯೂ ಕೆಲವರಿಗೆ ಈ ವಿಷಯದಲ್ಲಿ ಸಂಶಯವುಂಟಾಗುತ್ತಿತ್ತೆಂದೂ ಒಮ್ಮೆ ಸ್ವಾಮಿಗಳು ಶಯ್ಯಾಗೃಹದಲ್ಲಿರುವಾಗ ಶಿಷ್ಯನೊಬ್ಬನು ಇಣಿಕಿ ನೋಡಿದನೆಂದೂ ಹೇಳುವದುಂಟು. ಪರಮಹಂಸರ ಪತ್ನೀವಿಷಯಕವಾದ ನಿಷ್ಕಾಮಮಹಿಮೆಯನ್ನು ಮುಂದೆ ಹೇಳುವ ಸಂಗತಿಯಿಂದ ಕೆಲವುಮಟ್ಟಿಗೆ ಕಲ್ಪಿಸಿಕೊಳ್ಳಬಹುದು.

ಒಂದು ಅಮಾವಾಸ್ಯೆಯ ದಿನ ಸಾಯಂಕಾಲದಲ್ಲಿ ಪರಮಹಂಸರು ದೇವಿಯ ಪೂಜಾಸಾಮಗ್ರಿಗಳನ್ನು ಸಿದ್ಧಪಡಿಸೆಂದು ಶಾರದಾದೇವಿಯವರಿಗೆ ಹೇಳಿದ್ದರು. ಪೂಜೋಪಕರಣಗಳೆಲ್ಲಾ ಸಿದ್ಧವಾಗುವಷ್ಟರಲ್ಲಿ ರಾತ್ರಿ ಒಂಬತ್ತು ಬಡಿಯಿತು; ಪೂಜೆಗೆ ಆರಂಭವಾದಾಗ ಶಾರದಾದೇವಿಯವರು ಅಲ್ಲಿಯೇ ಕುಳಿತಿದ್ದರು. ಪೂಜೆಯನ್ನು ಆರಂಭಿಸಿದ ಪರಮಹಂಸರು ಒಮ್ಮಿಂದೊಮ್ಮೆ ದೇವಿಯ ಆಸನದಲ್ಲಿ ಏರಿ ಕೂಡ್ರೆಂದು ಪತ್ನಿಗೆ ಅಜ್ಞಾಪಿಸಿದರು. ದೇವಿಯವರು ಎಷ್ಟುಮಾತ್ರವೂ ಹಿಂದೆಮುಂದೆ ನೋಡದೆ ಪೂಜಾಸನದಲ್ಲಿ ಹೋಗಿ ಕುಳಿತರು. ಪರಮಹಂಸರು ಯಥಾವಿಧಿಯಾಗಿ ಮಂತ್ರಗಳನ್ನು ಉಚ್ಚರಿಸುತ್ತ ಷೋಡಶ ಉಪಚಾರಗಳಿಂದ ದೇವಿಯನ್ನು ಪೂಜಿಸಿ—ಸರ್ವಮಂಗಳಮಾಂಗಲ್ಯೇ ಶಿವೇ ಸರ್ವಾರ್ಥಸಾಧಕೇ । ಶರಣ್ಯೇ ತ್ರ್ಯಂಬಕೇ ದೇವಿ । ನಾರಾಯಣಿ ನಮೋಽಸ್ತುತೇ ॥ ಎಂದು ಸಾಷ್ಟಾಂಗಿ ನಮಸ್ಕಾರ ಮಾಡಿದರು!

ಶ್ರೀದೇವಿಯವರ ವಿಷಯವಾಗಿ ಇಲ್ಲವೆ ಪರಮಹಂಸರ ವಿಷಯವಾಗಿ ಸವಿಸ್ತಾರವಾದ ಸಂಗತಿಗಳನ್ನು ಹೇಳುವದು ಅಥವಾ ಅವರ ಜೀವನರಹಸ್ಯವನ್ನು ಬರೆಯುವದು ನಮ್ಮ ಉದ್ದೇಶವಲ್ಲ. ಅಂತಹ ಸಾಹಸವೂ ಸಾಧ್ಯವಲ್ಲ. ಮಹಾತ್ಮರ ಮಹಿಮೆಯನ್ನು ಮಹಾತ್ಮರೇ ಬಲ್ಲರು. ಅನುರೂಪದಾಂಪತ್ಯದ ಮಾದರಿಯಿದು.

ಪತಿವಿಯೋಗಾನಂತರದಲ್ಲಿ ದೇವಿಯವರು ಸನ್ಯಾಸವನ್ನು ಸ್ವೀಕರಿಸಿ ತಪೋನಿಷ್ಠರಾಗಿ ಮಿಕ್ಕ ಆಯುಷ್ಯವನ್ನು ಕಳೆದರು. ಆರಂಭದಲ್ಲಿ ಸೇರಿಸಿರುವ ಭಾವಚಿತ್ರವು ಅವರ ಈ ಮುಂದಿನ ಜೀವನಕ್ರಮವನ್ನು ಸೂಚಿಸುವಂತಿದೆ.

**ಪತಿದೇವತೆಯ ಧರ್ಮಮಾರ್ಗದೊಳನುಕೂಲೆ ।**
**ಪತಿಯಾಚರಿಪ ಕರ್ಮದಾಸಿ ॥**
**ಪತಿಯಿಷ್ಟ ಸಾಧನೆಯೊಳಿಷ್ಟ ದೇವತೆ ಸತಿಯು ।**
**ಮತಿವಂತರರಿಯುವದಿವನು ॥ ೧ ॥**

## ೧೦ ರಾಣಿ ರಾಸಮಣಿ.



ರಾಣಿ ರಾಸಮಣಿಯು ದಕ್ಷಿಣೇಶ್ವರದಲ್ಲಿ ಒಂದು ಭವ್ಯವಾದ ಕಾಳಿಯ ಗುಡಿಯನ್ನೇ ಕಟ್ಟಿ ಮೂರ್ತಿ ಪ್ರತಿಷ್ಠಾಪನೆ ಮಾಡಿಸಿ ರಾಮಕೃಷ್ಣ ಪರಮಹಂಸರನ್ನು ದೇವಿಯ ಅರ್ಚಕರನ್ನಾಗಿ ನಿಯಮಿಸಿದ್ದಳು. ಮೂರ್ತಿ ಪ್ರತಿಷ್ಠಾಪನೆಯ ಒಂದೇ ದಿನದ ವೆಚ್ಚವು ಒಂಬತ್ತು ಲಕ್ಷ ರೂ. ಗೆ ಮಿಕ್ಕಿತ್ತು. ಕಲಕತ್ತೆಯ ದಕ್ಷಿಣಕ್ಕೆ 'ಜಾನ್ ಬಜಾರ' ಎಂಬ ಗ್ರಾಮವು ರಾಸಮಣಿಯ ಊರು. ಆಕೆ ವಿಧವೆ. ಪತಿಯ ಮರಣದಿಂದ ಬಹು ದುಃಖಿತಳಾದರೂ ಜಮೀನುದಾರಿಕೆಯ ಕೆಲಸಗಳನ್ನೆಲ್ಲ ತಾನೇ ನೋಡಿಕೊಳ್ಳುವಳು. ಧರ್ಮದಲ್ಲಿಯೂ ಅತುಲಶ್ರದ್ಧೆಯಿರುವುದರಿಂದಲೇ ಅವಳು ಮೇಲೆ ಹೇಳಿದಂತೆ ಅಸಂಖ್ಯ ದ್ರವ್ಯವನ್ನು ವೆಚ್ಚ ಮಾಡಿ ದೇವತಾಕಾರ್ಯಗಳನ್ನು ನೆರವೇರಿಸಿದಳೆಂಬದು ಸಹಜವು.

ಪರಮಹಂಸರು ದೇವಿಯ ಅರ್ಚಕರಾಗಿರುವಾಗ ರಾಣಿರಾಸಮಣಿಯು ಮೇಲಿಂದ ಮೇಲೆ ದಕ್ಷಿಣೇಶ್ವರಕ್ಕೆ ಹೋಗಿ ಕಾಳಿಯ ದರ್ಶನ ತೆಗೆದುಕೊಂಡು ಬರತೊಡಗಿದಳು. ಒಂದು ದಿನ ರಾಣಿಯು ದೇವಿಯ ದರ್ಶನಕ್ಕೆ ಹೋದಾಗ ರಾಮಕೃಷ್ಣ ಪರಮಹಂಸರನ್ನು ಕಂಡು ಕೆಲವು ಕೀರ್ತನೆಗಳನ್ನು ಹಾಡಬೇಕೆಂದು ಕೇಳಿಕೊಂಡಳು. ಪರಮಹಂಸರು ದೇವಿಯ ಮುಂಗಡೆಯಲ್ಲಿ ಭಾವಾವಿಷ್ಟರಾಗಿ ಹಾಡುತ್ತಿರಲು ರಾಣಿಯು ಅಲ್ಲಿಯೇ ಕುಳಿತು ಕೇಳುತ್ತಿದ್ದಳು. ಪರಮಹಂಸರು ಹಾಡುತ್ತ ಹಾಡುತ್ತ ತಟ್ಟನೆ ರಾಣಿಯ ಬಳಿಗೆ ಬಂದು "ದೇವಿಯ ಮುಂದೆ ಕುಳಿತಾಗಲೂ ಇದೇ ಆಲೋಚನೆಯೇ ?" ಎಂದು ಕೆನ್ನೆಗೆ ಬಲವಾಗಿ ಹೊಡೆದು ಬಿಟ್ಟರು. ನೆರೆದವರೂ ರಾಣಿಯ ಅನುಚರರೂ ಗಾಬರಿಯಾಗಿ ಕೋಪಾನ್ವಿತರಾಗಿ ನೋಡುತ್ತಿರಲು ರಾಣಿಯು ಕಣ್ಣು ಸನ್ನೆಯಿಂದ ಅವರನ್ನೆಲ್ಲ ಹಿಂದೆ ಸರಿಸಿ ಪರಮಹಂಸರ ಪಾದಕ್ಕೆರಗಿ ತನ್ನ ತಪ್ಪು ಒಪ್ಪಿಕೊಂಡು ಕ್ಷಮೆಯನ್ನು ಬೇಡಿದಳು.

ರಾಣಿ ರಾಸಮಣಿಯು ದೇವಿಯ ಸನ್ನಿಧಿಯಲ್ಲಿ ಕುಳಿತು ಕೀರ್ತನೆಯನ್ನು ಕೇಳುತ್ತಿರುವಾಗಲೂ ಅಂತರಂಗದಲ್ಲಿ ಯಾವದೋ ಒಂದು ಜಮೀನುದಾರಿಕೆಯ ಪ್ರಶ್ನೆಯನ್ನು ಬಿಡಿಸಲು ಯೋಚಿಸುತ್ತಿದ್ದಳು. ಭಾವಾವಿಷ್ಟರಾದ ಪರಮಹಂಸರಿಗೆ ಇದು ತಿಳಿಯಲು ಅವರು ರಾಣಿಯನ್ನು ನಿರ್ದಾಕ್ಷಿಣ್ಯದಿಂದ ಶಿಕ್ಷಿಸಿದ್ದರು.

**ಉಡುತೊಡುಗೆ ಹಣಕಾಸು ಸಂಸಾರದಭಿಮಾನ |**
**ಪಡಿಗಡಿಗೆ ನರರ ಬಾಧಿಸಲು ||**
**ಕಡುನಿಷ್ಠ ಹರಿಭಕ್ತರಂತರಂಗವ ಸೇರಿ |**
**ಕೊಡುವವೈ ಭಕ್ತಿಭಾವನೆಯ || ೧ ||**

## ೧೧. ದೇವಿಯ ಆರಾಧನೆ.



ರಾಮಕೃಷ್ಣ ಪರಮಹಂಸರು ದೇವಿಯ ಭಕ್ತರು. ನಿಷ್ಕಲಂಕ ಚಿತ್ತರು. ಅಂತರಂಗವು ಬೆಳೆಯುತ್ತ ಹೋದಂತೆ ಬಹಿರಂಗವು ಕಳಚಿ ಬೀಳುತ್ತ ನಡೆಯುವದೆಂದು ಅವರು ಅಡಿಗಡಿಗೆ ಆಡುತ್ತಿದ್ದರು. ಇದರ ಅರ್ಥವನ್ನು ತಿಳಿದುಕೊಳ್ಳುವದು ಅವರ ಶಿಷ್ಯರಲ್ಲನೇಕರಿಗೆ ತುಂಬಾ ಕಠಿಣವೆನಿಸಿತು ಆಗ ಅವರು ತಮ್ಮ ಅನುಭವದ ಒಂದು ಸಂಗತಿಯನ್ನು ಈ ರೀತಿ ವಿವರಿಸಿರುವರು:—

“ ನಾನು ದಕ್ಷಿಣೇಶ್ವರದಲ್ಲಿ ರಾಣಿ ರಾಸಮಣಿಯವರು ಸ್ಥಾಪಿಸಿದ ಕಾಳಿಯ ಗುಡಿಯಲ್ಲಿ ಅರ್ಚಕನಾಗಿ ನಿಂತುಕೊಂಡಿದ್ದೆನು. ದೇವಿಯ ಅರ್ಚನೆಯ ಕಾಲದಲ್ಲಿ ನನಗೆ ಇನ್ನಿಲ್ಲದಷ್ಟು ಆನಂದವಾಗುತ್ತಿದ್ದಿತು. ದೇವಿಯು ನನಗೆ ದರ್ಶನಕೊಡಬೇಕೆಂದು ನಾನು ಅಂತಃಕರಣದಲ್ಲಿ ಸರ್ವದಾ ಬಯಸುತ್ತಿದ್ದೆನು. ದೇವಿಯು ಬರಿಗಣ್ಣಿಗೆ ಕಾಣಿಸುವದೆಂತು? ಅವಳು ಯಾವ ರೂಪದಲ್ಲಿ ಬಂದು ನನಗೆ ದರ್ಶನ ಕೊಡಬೇಕು? ಇವೇ ಮುಂತಾದ ತೊಂದರೆಗಳು ಮೊದಲು ಮೊದಲು ನನ್ನ ಆಶೆಯ ಮಾರ್ಗದಲ್ಲಿ ನಿರಾಶೆಯ ಕಂಟಕಗಳಾಗಿ ಬರುತ್ತಿದ್ದವು. ದೇವಿಯು ನನ್ನಂತಾಗಿ ದರ್ಶನಕೊಡಲು ಬರುವಳೋ ಇಲ್ಲವೆ ನಾನೇ ದೇವಿಯಂತಾಗಿ ಅವಳ ದರ್ಶನಕ್ಕೆ ಹೋಗಬೇಕೋ ಎಂಬ ಇನ್ನೊಂದು ಸಂಶಯವು ನನ್ನನ್ನು ಬಾಧಿಸುತ್ತಿತ್ತು. ಕೊನೆಗೆ ನಾನೇ ದೇವಿಯ ಗುಣಗಳನ್ನೆಲ್ಲಾ ಕಲಿತುಕೊಂಡು ಅವಳಂತೆಯೇ ಆಗಬೇಕೆಂದು ನಿರ್ಧರಿಸಿಕೊಂಡೆನು.

ನಾನು ದೇವಿಯಂತಾಗಬೇಕಾದರೆ ಪ್ರಪಂಚದ ಸಕಲ ಬಂಧನಗಳನ್ನು ಕಳೆದುಕೊಳ್ಳುವದು ಅವಶ್ಯವೆಂದು ತೋರಿತು. ಮೊದಲು ಇವುಗಳನ್ನು ಮನಸ್ಸಿನಿಂದ ಹೊರದೂಡಿ ಅಂತರಂಗದ ಕಿಲ್ಬಿಷವನ್ನು ಕಳೆದು ಅದನ್ನು ಉಜ್ವಲಕಾಂತಿಯಿಂದ ಬೆಳಗುವಂತೆ ಮಾಡಬೇಕೆನ್ನಿಸಿತು. ಬಳಿಕ ಬಾಹ್ಯಾಂಗದ ಬಂಧನಗಳನ್ನು ಹರಿದೊಗೆಯಲು ಯತ್ನಿಸಿದೆನು.

ದಿನಾಲು ದೇವಿಯ ಪೂಜೆಯನ್ನು ಮುಗಿಸಿ ಗುಡಿಯ ಬಾಗಿಲುಗಳನ್ನಿಕ್ಕಿದ ಬಳಿಕ ನಾನು ಸಮೀಪದಲ್ಲಿರುವ ಒಂದು ನಿರ್ಜನವಾದ ತೋಟಕ್ಕೆ ಹೋಗಿ ಗಿಡಗಳ ಗುಂಪಿನಲ್ಲಿ ದೇವಿಯ ಧ್ಯಾನದಲ್ಲಿ ಮಗ್ನನಾಗಿರುತ್ತಿದ್ದೆನು. ನನ್ನ ಸಂಗಡಿಗನಾದ ಹೃದಯನು ದಕ್ಷಿಣೇಶ್ವರದಲ್ಲಿದ್ದು ಯಾವಾಗಲೂ ನನ್ನನ್ನು ಹಿಂಬಾಲಿಸಿ ಇರುತ್ತಿದ್ದನು. ನನ್ನ ಅಂತರಂಗದ ವಿಕಾಸದಿಂದ ಬಹಿರಂಗದ ಮೇಲಿನ ಮೋಹದ ಬಹಿರ್ವ್ಯಾಪಾರಗಳಲ್ಲಿ ಅಕ್ರಮವೂ ಅಡಿಗಡಿಗೆ ತೋರುತ್ತಿದ್ದುವಾದ್ದರಿಂದ ಸಾಮಾನ್ಯರಿಗೆ ನಾನು ಹುಚ್ಚನಂತೆ ತೋರುತ್ತಿದ್ದೆನು. ಜನರು ನನ್ನನ್ನು ಹುಚ್ಚನೆಂದು ಹೇಳುವದರಿಂದ ನನಗೆ ಎಷ್ಟೊ ಕೆಡಕೆನಿಸುತ್ತಿರ

ಲಿಲ್ಲಿ. ಆದರೆ ಅದರಿಂದ ನನ್ನ ಅಪ್ತೇಷ್ಟರಿಗೆ ಮಾತ್ರ ಬಹು ದುಃಖವೆನಿಸುತ್ತಿತ್ತು. ಹೃದಯನು ಈ ಒಗೆಯ ನನ್ನ ಹುಚ್ಚುತನವನ್ನು ಕಡಿಮೆ ಮಾಡಬೇಕೆಂದು ನನ್ನನ್ನು ಕಾಯ್ದುಕೊಂಡಿರುತ್ತಿದ್ದನು.

ಒಂದು ದಿನ ದೇವಿಯ ಪೂಜೆಯನ್ನು ಮುಗಿಸಿ ಗುಡಿಯ ಬಾಗಿಲುಗಳನ್ನಿಕ್ಕಿದ ಬಳಿಕ ನಾನು ಮನೆಗೆ ಹೋಗದೆ ದಿನದ ಪ್ರಾರ್ಥನಾಸ್ಥಳಕ್ಕೆ ನಡೆದೆನು. ತೋಟದಲ್ಲಿ ದಟ್ಟಾಗಿ ಬೆಳೆದ ಗಿಡಗಳ ಗುಂಪಿನಲ್ಲಿ ಒಂದು ಬನ್ನಿಯ ಮರವನ್ನು ನೋಡಿ ಅದಕ್ಕೆ ಮೈಮೇಲಿನ ಅರಿವೆಗಳನ್ನೆಲ್ಲಾ ತೆಗೆದಿಟ್ಟು ದಿಗಂಬರನಾದೆನು. ಕೊರಳೊಳಗಿನ ಜನಿವಾರವೂ ಭಾರವೆನಿಸಲು ಅದನ್ನೂ ತೆಗೆದು ಶಮೀವೃಕ್ಷಕ್ಕೆ ತೊಡಕಿಸಿದೆನು. ಬಳಿಕ ಆಸನಾವಿಷ್ಟನಾಗಿ ಕುಳಿತು ದೇವಿಯ ಧ್ಯಾನವನ್ನು ಪ್ರಾರ್ಥಿಸಬೇಕೆನ್ನುವಷ್ಟರಲ್ಲಿ ಹಿಂದಿನಿಂದ ಹೃದಯನು, "ಮಗೂ! ಏನಪ್ಪಾ ಇದು! ಎಂತಹ ಹುಚ್ಚುತನ! ಯಾರು ಕಲಿಸಿದರಪ್ಪಾ ನಿನಗೆ!" ಎಂದು ಕನಿಕರದಿಂದ ಕಣ್ಣೀರಿಡುತ್ತ ನನ್ನ ಮುಂದೆ ನಿಂತುಬಿಟ್ಟನು. ಅವನು ನನ್ನನ್ನು ಹಿಂಬಾಲಿಸಿದುದನ್ನು ನಾನು ನೋಡಿರಲಿಲ್ಲ. ಹೃದಯನ ಇದಿರಿಗೆ ಬತ್ತಲೆಯಾಗಿ ನಿಲ್ಲುವುದಕ್ಕೆ ನನಗೆ ಎಷ್ಟೂ ಸಂಕೋಚವೆನಿಸಲಿಲ್ಲ. ಅದೊಂದು ಒಳ್ಳೆಯ ಲಕ್ಷಣವೆಂದು ತಿಳಿದುಕೊಂಡೆನು. ಮತ್ತು "ಮಾವಾ,—ನಿನಗೆ ಇದೆಲ್ಲಾ ತಿಳಿಯದ ಮಾತು. ಹೇಳಿದರೂ ತಿಳಿದುಕೊಳ್ಳುವದು ಸುಲಭವಲ್ಲ. ದೇವಿಯು ಹೀಗೆಯೇ ದ್ವೇಷ, ಲಜ್ಜೆ, ಕುಲ, ಶೀಲ, ಭಯ, ಮಾನ, ಅಭಿಮಾನ, ಜಾತಿ ಎಂಬ ಅಷ್ಟಪಾಶಗಳನ್ನು ತೊರೆದು ನಿರ್ಲಿಪ್ತಳಾಗಿರುವಳು. ನಾನು ಅವಳಂತೆ ನಿರ್ಲಿಪ್ತನಾಗದೆ ಅವಳ ದರ್ಶನವಾಗುವ ಬಗೆ ಹೇಗೆ? ಆದುದರಿಂದ ಹೀಗೆ ದಿಗಂಬರನಾದೆನು. ಯಜ್ಞೋಪವೀತವೂ ನನಗೆ ಭಾರವೆನಿಸಿತು. ಅದೂ ಒಂದು ಅಹಂಕಾರದ ಹೆಗ್ಗುರುತು. ನಾನು ಬ್ರಾಹ್ಮಣ, ಇತರರಿಗಿಂತ ಹೆಚ್ಚಿನವನು ಎಂಬ ಭಾವನೆಯು ಆ ಯಜ್ಞೋಪವೀತದಿಂದ ಉಂಟಾಗುವಂತೆ ತೋರಿತು ಆದರಿಂದ ಅದನ್ನು ಕಳೆದು ಬಿಟ್ಟೆನು!" ಎಂದೆನು.

ಹೃದಯನು ಆವುದೋ ಒಂದು ವಿಧವಾದ ಸದ್ಭಾವದಿಂದ ನನ್ನನ್ನು ಬಿಗಿಯಾಗಿ ಅಪ್ಪಿಕೊಂಡು ಪರವಶನಾಗಿ ಬಿದ್ದುಬಿಟ್ಟನು."

**ಕಷ್ಟತಾಪತ್ರಯದ ಭ್ರಷ್ಟಸಂಸಾರದ ।**
**ಕಷ್ಟವನು ಕಳೆಯಲ್ಕೆ ನರನೆ ॥**
**ದುಷ್ಟ ಲಜ್ಜಾಭಯ ಮಾನಾಭಿಮಾನಾದಿ ।**
**ಅಷ್ಟಪಾಶವ ಹರಿದೊಗೆಯ್ಯೆ ॥ ೧ ॥**

## ೧೨. ಸ್ನಾನಮಾಡುತ್ತಿರುವ ಹೆಂಗಸರು.




ರಾಮಕೃಷ್ಣ ಪರಮಹಂಸರು ಇನ್ನೂ ಚಿಕ್ಕವರಾಗಿದ್ದರು. ಅವರ ಮನೆಗೆ ಸಮೀಪದಲ್ಲಿ ಒಂದು ದೊಡ್ಡ ಕೆರೆಯಿದ್ದಿತು. ಓಣಿಯೊಳಗಿನ ಹೆಂಗಸರೂ ಗಂಡಸರೂ ಅಲ್ಲಿಗೆ ಸ್ನಾನಕ್ಕೆ ಬರುತ್ತಿದ್ದರು. ಒಂದು ದಿನ ಬಾಲಕ ಗದಾಧರನೂ (ಪರಮಹಂಸರ ಬಾಲ್ಯದ ಹೆಸರು) ಅವನ ಓರಿಗೆಯ ಗೆಳೆಯರೂ ಕೆರೆಯಲ್ಲಿ ಈಸುತ್ತ ಹೆಂಗಸರು ಸ್ನಾನಮಾಡುತ್ತಿರುವ ಘಾಟಿನ ಕಡೆಗೆ ಹೋಗಿ ನೀರು ಸಿಡಿಸಿ ಅವರನ್ನು ತೊಂದರೆ ಪಡಿಸಹತ್ತಿದರು. ಆಗ ಆ ಹೆಂಗಸರಲ್ಲೊಬ್ಬಳು ಗದ್ದರಿಸಿ "ನೀವು ಗಂಡು ಹುಡುಗರು ಹೆಂಗಸರು ಸ್ನಾನಮಾಡುವ ಸ್ಥಳಕ್ಕೆ ಬರಬಾರದು. ಎಂತಹ ನಾಚಿಕೆಗೇಡಿತನವಿದು?" ಎಂದು ಮುಂತಾಗಿ ಗದ್ದರಿಸಿದಳು. ಐದು ವರುಷದ ಬಾಲಕರಿಗೆ ಆ ಮಾತಿನ ಸರಿಯಾದ ಅರ್ಥವು ತಿಳಿಯದೆ ಇದ್ದರೂ ಅವರೆಲ್ಲರೂ ಸುಮ್ಮನೆ ಎರಡನೆಯ ಘಾಟಿನ ಕಡೆಗೆ ನಡೆದರು. ಗದಾಧರನು ಮಾತ್ರ ಸ್ನಾನಮಾಡುವ ಹೆಂಗಸರನ್ನು ನೋಡಿದರೆ ಏನಾಗುವದೋ ಎಂಬ ಕುತೂಹಲದಿಂದ ನಾಲ್ಕಾರು ದಿನ, ದಿನಾಲು ಅಡಗಿ ನಿಂತುಕೊಂಡು ಸ್ನಾನಮಾಡುವ ಹೆಂಗಸರನ್ನು ನೋಡಿದನು. ಆದರೂ ಆತನಿಗೆ ಏನೂ ಆಗದಿರಲು ಮೊದಲನೆಯ ದಿನ ತನ್ನನ್ನು ಸ್ನಾನಮಾಡುವ ಹೆಂಗಸರನ್ನು ನೋಡಲಾಗದೆಂದು ಬೆದರಿಸಿದ ಮುದುಕಿಯ ಬಳಿಗೆ ಹೋಗಿ 'ಅಮ್ಮಾ, ನಾನು ಈಗ ನಾಲ್ಕಾರು ದಿನಗಳಿಂದಲೂ ದಿನಾಲು ತಪ್ಪದೆ ಈ ಗಿಡದ ಮರೆಗೆ ನಿಂತು ಸ್ನಾನಮಾಡುವ ಹೆಂಗಸರನ್ನು ನೋಡುತ್ತಿದ್ದೇನೆ. ಆದರೆ ನನಗೆ ಏನೂ ಆಗಲೇ ಇಲ್ಲ!" ಎಂದನು. ಮುದುಕಿಯು ನಕ್ಕಳು. ಅವನಿಗೆ ಏನು ಹೇಳಬೇಕೋ ತಿಳಿಯದೆ ಅವಳು ಸುಮ್ಮನೆ ಮುಂದೆ ನಡೆದಳು.

ಇದೇ ರೀತಿ ಪಾರಮಾರ್ಥಿಕ ರಹಸ್ಯಗಳನ್ನು ತೆಗೆದುಕೊಳ್ಳಲು ಆವಶ್ಯಕವಿರುವ ಮಾನಸಿಕ ವಿಕಾಸವನ್ನು ಹೊಂದದಿರುವ ಕೇವಲ ಬಾಲಕರಂತಿರುವವರಿಗೆ ದೇವರ ಮಹಿಮೆಯ ವಿಷಯವನ್ನು ಇಲ್ಲವೆ ತತ್ವಜ್ಞಾನದ ಸಂಗತಿಗಳನ್ನು ತಿಳಿಸಿಹೇಳುವದು ಸಾಧ್ಯವಿರುವದಿಲ್ಲ. ಅಂತಹ ಪ್ರಸಂಗದಲ್ಲಿ ಅವರು ಹಿರಿಯರು ಹೇಳುವ ಮಾತಿನಂತೆ ನಡೆಯುವದಿಷ್ಟೇ ತಮ್ಮ ಕರ್ತವ್ಯವೆಂದು ತಿಳಿದು ಅದರಂತೆ ನಡೆಯಬೇಕಾಗುವದು.

**ಹಿರಿಯರುಪದೇಶಿಸುವ ಗೂಢವಾದಾ ಜ್ಞಾನ ।**
**ವರಿತುಕೊಳ್ಳಲು ಸಾಧ್ಯವಿರಲು ॥**
**ಅರಿತುಕೊಳ್ಳುವುದಂತೆ ಸಾಧ್ಯವಾಗಿರದಿರಲು ।**
**ಶಿರಬಾಗಿ ನಡೆಯುವದವರ್ಗೆ ॥ ೧ ॥**

# ೧೩. ಆಚಾರಶೀಲನಾದ ಮಧುಸೂದನನು.



ಮಧುಸೂದನನು ಆಚಾರವಂತ ಆಚಾರ್ಯನು. ಆತನಿಗೆ ಮಡಿಮೈಲಿಗೆಗಳ ಭಾವನೆ ಬಹಳ, ಆದರೆ ಈ ತರದ ಬಾಹ್ಯ ಆಡಂಬರದ ಆಚರಣೆಗಿಂತಲೂ ಅಂತರಂಗದ ನೈರ್ಮಲ್ಯದ ಕಡೆಗೇ ಆತನ ಲಕ್ಷ್ಯವು ವಿಶೇಷವಾಗಿದ್ದಿತು. ಅಂತರಂಗದ ಶುದ್ಧಿಯೇ ನಿಜವಾಗಿ ಶುದ್ಧಿಯೆಂಬದು ಅವನ ದೃಢವಾದ ನಂಬಿಗೆಯಾಗಿದ್ದಿತು. ದೇವರು ಬ್ರಾಹ್ಮಣರಲ್ಲಿ ಆತನ ಶ್ರದ್ಧೆಯು ಕಡಿಮೆಯಾಗಿರಲಿಲ್ಲ; ಅನಾಥ ಅಜ್ಞಾನಿಗಳಲ್ಲಿ ಆತನಿಗೆ ಅನಾದರವಿರಲಿಲ್ಲ. ಆತನ ಈ ತರದ ಸದಾಚಾರವನ್ನು ನೋಡಿ ನೆರೆಹೊರೆಯುವರೂ ಊರವರೂ ನೆರೆಯೂರವರೂ, ಎಲ್ಲರೂ ಆತನಲ್ಲಿ ತುಂಬಾ ಭಯಭಕ್ತಿಗಳನ್ನು ತೋರಿಸುತ್ತಿದ್ದರು.

ಮಧುಸೂದನನು ಒಮ್ಮೆ ತೀರ್ಥಯಾತ್ರೆಗೆ ಹೊರಟನು. ಅಂತರಂಗದ ಭಕ್ತಿಯ ಉಜ್ವಲತೆಯು ಹೆಚ್ಚಿ ಬಹಿರಂಗದ ಅಹಂಕಾರ ಅಭಿಮಾನಗಳು ಕಳಚಿಬಿದ್ದು ಮನುಷ್ಯನು ಪುನೀತನಾಗಬೇಕಾದರೆ ಬಾಹ್ಯಶರೀರದ ದಂಡನೆಯು ಅವಶ್ಯವೆಂದು ಆತನು ತಿಳಿದಿದ್ದನು. ಆದುದರಿಂದಲೇ ಆತನಿಗೆ ವ್ರತೋಪವಾಸಾದಿಗಳಲ್ಲಿ ಶ್ರದ್ಧೆಯುಂಟಾಗಿದ್ದಿತು. ತೀರ್ಥಯಾತ್ರೆಗಾಗಿ ಹೊರಟ ಅವನು ನಾನಾತೀರ್ಥಕ್ಷೇತ್ರಗಳಲ್ಲಿ ಸಂಚರಿಸುತ್ತ ವೃಂದಾವನಕ್ಕೆ ಬಂದನು. ವೃಂದಾವನವು ಶ್ರೀಕೃಷ್ಣನ ಲೀಲಾ ಭೂಮಿಯು. ವೃಂದಾವನದ ದರ್ಶನಮಾತ್ರದಿಂದ ಮಧುಸೂದನನ ಮನಸ್ಸು ಆನಂದಭೂಮಿಯಲ್ಲಿ ಅಲೆದಾಡತೊಡಗಿತು. ಆತನು ಶ್ರೀಕೃಷ್ಣನ ಲೀಲಾವಿನೋದಗಳ ಕಥೆಗಳನ್ನು ಕೇಳಿ ಕೇಳಿ ಆನಂದಪರವಶನಾದನು. ಅವನು ಶ್ರೀಕೃಷ್ಣನ ಮಂದಿರದಲ್ಲಿ ನಾಲ್ಕೂ ಕಡೆಗೆ ಅಲೆದಾಡಿ ಎಲ್ಲ ಸ್ಥಳಗಳನ್ನು ನೋಡಿದನು; ಎಲ್ಲ ಸಂಗತಿಗಳನ್ನು ತಿಳಿದುಕೊಂಡನು. ಅದರಂತೆ ದಿನಾಲು ಊರಹೊರಗಣ ದೂರದೂರದ ಸ್ಥಳಗಳನ್ನು ನೋಡಿಕೊಂಡು ಬರುತ್ತಿದ್ದನು.

ಒಂದುದಿನ ಮುಂಜಾನೆ ಮಧುಸೂದನನು ವೃಂದಾವನದಲ್ಲಿ ಅಡ್ಡಾಡುತ್ತ ನಾಲ್ಕಾರು ಮೈಲು ದೂರದ ವರೆಗೆ ಹೋಗಿ ನದಿಯ ತೀರದಲ್ಲಿ ಕೆಲವು ಹೊತ್ತು ಕುಳಿತು ತಿರುಗಿ ಬರುವದಕ್ಕೆ ಹೊರಟನು. ಅಷ್ಟರಲ್ಲಿ ಮಧ್ಯಾಹ್ನವಾಗಿ ಬಿಸಿಲೇರಿ ನೆಲಕಾಯಿತು. ಹಕ್ಕಿಗಳು ಗಿಡಗಳ ನೆರಳು ಸೇರಿದುವು. ವಯೋವೃದ್ಧನಾದ ಮಧುಸೂದನನು ಬೇಸಿಗೆಯ ಬಿಸಿಲಿನ ತಾಪದಿಂದ ಬಳಲಿ ಕಂಗೆಟ್ಟನು. ಮಧ್ಯಾಹ್ನವಾಗುವದು ತಿಳಿದೊಡನೆ ನಿತ್ಯಕರ್ಮಗಳಿಗೆ ತಡವಾಯಿತೆಂದು ಆತನು ಅವಸರದಿಂದ ನಡೆಯುತೊಡಗಿದ್ದನು. ಆದರೆ

ಬರಬರುತ್ತ ಬಿಸಿಲಿನ ಬಳಲಿಕೆಯು ಹೆಚ್ಚಾಗಿ ಮುಂದೆ ನಡೆಯಲು ಕಾಲುಗಳು ಏಳ ದಂತಾದವು. ಬಾಯಾರಿ ಬವಳಿ ಬರಲಾಯಿತು. ಅತ್ತಿತ್ತ ನೋಡುವಷ್ಟರಲ್ಲಿ ಸಮೀಪ ದಲ್ಲೊಂದು ಬಾವಿಯನ್ನು ಕಂಡನು. ಆಗ ಅವನು ಬಾವಿಗೆ ಹೋಗಿ ನೀರು ಕುಡಿದು ತುಸು ವಿಶ್ರಾಂತಿ ಹೊಂದಿ ಮುಂದೆ ಸಾಗೋಣವೆಂದು ಅಲ್ಲಿಗೆ ಹೋದನು. ಬಾವಿಯಲ್ಲಿ ಒಬ್ಬನು ನೀರು ಸೇದುತ್ತಿರುವುದನ್ನು ಕಂಡು ಮಧುಸೂದನನು 'ಅಣ್ಣಾ ಗಂಟಲೊಣ ಗಿದೆ. ಎರಡು ಬೊಗಸೆ ನೀರು ಕೊಡಬಾರದೇ' ಎಂದನು.

ಆಗ ಆತನು ತಿರುಗಿ ನೋಡಿ:--"ಸ್ವಾಮೀ, ತಮ್ಮನ್ನು ನೋಡಿದರೆ ಆಚಾರಶೀಲ ರಾದ ಬ್ರಾಹ್ಮಣರಂತೆ ತೋರುವಿರಿ. ನಾನು ಜಾತಿಯಿಂದ ಹೊಲೆಯನು. ಹ್ಯಾಗೆ ಮಾ ಡಲಿ?" ಎಂದು ವಿನಯದೊಡನೆ ನುಡಿದನು.

ಮಧುಸೂದನ:—"ಅಣ್ಣಾ, ನೀನನ್ನುವದು ತಿಳಿಯಿತು. ನೀನು ಜಾತಿಯಿಂದ ಹೊಲೆಯನಾದರೂ ನಿನ್ನ ನೀತಿಯಲ್ಲಿ ಹೊಲೆತನವು ತೋರುವುದಿಲ್ಲ. ನೀತಿಯಿಂದ ಹೊಲೆ ಯನಾದವನೇ ನಿಜವಾದ ಹೊಲೆಯನು. ಯಾವದೊಂದು ಜಾತಿಯಲ್ಲಿ ಹುಟ್ಟುವದು ಮನುಷ್ಯನ ಅಂಕೆಯೊಳಗಿನ ಮಾತಲ್ಲ. ಆದರೆ ನೀತಿಯಿಂದ ಹೊಲೆಯನಾಗದಿರುವದು ಮಾತ್ರ ಬಹುಮಟ್ಟಿಗೆ ಆತನ ಕೈಯಲ್ಲಿರುವದು. ಅದೂ ಅಲ್ಲದೆ ಯಾವ ಜಾತಿಯಲ್ಲಿಯೇ ಹುಟ್ಟಿದರೂ ಕೂಡ ಭಗವದ್ಭಕ್ತಿಯಿಂದ ಆತನು ಪುನೀತನಾಗಬಲ್ಲನು. ನಾನು ನಿನ್ನನ್ನು ಪುನೀತನಾಗಿ ಮಾಡುವೆನು. ಆ ಮೇಲೆ ನೀನು ನನಗೆ ನೀರು ಸೇದಿಕೊಡಲು ಅಡ್ಡಿ ಯೇನು?"

ಹೊಲೆಯನು ಮಧುಸೂದನನ ಪಾದಕ್ಕೆ ಎರಗಿದನು.

ಮಧುಸೂದನನು ಆತನಿಗೆ ಭಗವಂತನ ನಾಮೋಚ್ಚಾರಣೆಯನ್ನು ಕಲಿಸಿ "ಅಣ್ಣಾ, ಮೂರುಸಾರೆ ಭಕ್ತಿಭಾವನೆಯಿಂದ ಆ ಜಗತ್ಪಾವನಕರನಾದ ಭಗವಂತನನ್ನು ಸ್ಮರಿಸು, ಆ ಮೇಲೆ ನೀರು ಸೇದಿ ತಂದು ಕೊಡು" ಎಂದನು.

ಹೊಲೆಯನು ಅದರಂತೆ ಭಕ್ತಿಪರವಶನಾಗಿ ಭಗವಂತನನ್ನು ಮೂರುಸಲ ಸ್ಮರಿಸಿ ಬಾವಿಯೊಳಗೆ ಕೊಡವನ್ನು ಬಿಟ್ಟು ನೀರು ಸೇದಿ ಆಚಾರ್ಯನ ಮುಂದೆ ತಂದು ಇಟ್ಟನು.

ಆಗ ಮಧುಸೂದನನು:—

"ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂಗತೋಪಿ ವಾ ।
ಯಃ ಸ್ಮರೇತ್ ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಃ ಶುಚಿಃ ॥"

[(ಮನುಷ್ಯನು) ಶುಚಿಯಾಗಿರಲಿ ಅಶುಚಿಯಾಗಿರಲಿ ಯಾವದೇ ಅವಸ್ಥೆಯಲ್ಲಿ ದ್ದರೂ ಭಗವಂತನ ಸ್ಮರಣೆಯಿಂದ ಅಂತರಂಗ ಬಹಿರಂಗಗಳಲ್ಲಿ ನಿರ್ಮಲನಾಗುವನು.]

ಎನ್ನುತ್ತ ಬೊಗಸೆಯೊಡ್ಡಿ ನೀರು ಕುಡಿದು ಕ್ಷಣಹೊತ್ತು ವಿಶ್ರಾಂತಿಯನ್ನು ಪಡೆದು ಮನೆಯ ದಾರಿಯನ್ನು ಹಿಡಿದನು.

ಹೊಲೆಯನು ಮಧುಸೂದನನಿಗೆ ಪುನಃ ನಮಸ್ಕಾರ ಮಾಡಿ, ‘ ಸ್ವಾಮೀ, ಊರವರು ತಮ್ಮನ್ನು——”

ಮಧುಸೂದನನು ನಡುವೆಯೇ “ ಅಣ್ಣಾ, ನೀನನ್ನುವದು ನನಗೆ ತಿಳಿಯಿತು. ಕರ್ಮಠರಾದ ಊರಜನರು ನನ್ನನ್ನು ಆಚಾರಬಾಹ್ಯನೆಂದು ದೂಷಿಸಬಹುದೆಂಬ ನಿನ್ನ ಸಂಶಯವು ನಿಜವೇ ಸರಿ. ಆದರೆ ನಾನು ಊರವರನ್ನು ಅವಲಂಬಿಸಿಲ್ಲ. ನನಗಾಗಿ ನಾನು ಇದ್ದೇನೆ. ನಾನೆಂದರೆ ನನ್ನ ಈ ಬಾಹ್ಯದ ನಶ್ವರತನುವಲ್ಲ. ಒಳಗಿನ ಭಗವಂತನೇ ನಾನು. ಆತನಿಗಾಗಿ ನಾನು ಬದುಕಿರಬೇಕು. ಆ ಅಂತರಾತ್ಮಶುದ್ಧವಾದ ಕಾರ್ಯಗಳನ್ನು ಮಾಡಲು ನನಗೆ ಈ ಜನರ ಭೀತಿಯು ಅಡ್ಡಬರಲಾರದು. ಬ್ರಾಹ್ಮಣನಂತೆಯೇ ಹೊಲೆಯನೂ ಆ ಭಗವಂತನ ಅಂಶವೇ ಸರಿ. ನನ್ನಲ್ಲಿರುವ ಭಗವಂತನೇ ನಿನ್ನಲ್ಲಿಯೂ ಇದ್ದಾನೆ. ಆತನ ಗುರುತನ್ನರಿತವನು ಈ ತೆರದ ಬಾಹ್ಯದ ಭೇದಭಾವನೆಗೆ ಎಡೆಗೊಡಲಾರನು. ಇನ್ನು, ತಿಳುವಳಿಕೆಯಿಲ್ಲದ ಜನರು ಈ ತರಹದ ಬಾಹ್ಯದ ಕಾಲ್ಪನಿಕ ಮಡಿವೈಲಿಗೆ, ಕರ್ಮಠ ಆಚಾರಗಳಿಗೇ ಮಹತ್ವ ಕೊಡುತ್ತಾರೆ. ಅವರಿಗೆ ಇನ್ನೂ ಆ ಅಂತರಾತ್ಮನ ಜ್ಞಾನವಾಗಿಲ್ಲವೆನ್ನಬೇಕು; ಆ ಅಂತರಾತ್ಮನ ಮಹಿಮೆಯಲ್ಲಿ ವಿಶ್ವಾಸವುಂಟಾಗಿಲ್ಲವೆನ್ನಬೇಕು. ಅಂಥವರನ್ನು ಕೂಡ ನಾವು ದೂಷಿಸಲಾಗದು. ಅವರು ಇನ್ನೂ ಆ ಯೋಗ್ಯತೆಗೆ ಮುಟ್ಟಿಲ್ಲವೆಂದು ತಿಳಿಯಬೇಕು. ” ಎಂದು ನುಡಿದು ಮನೆಗೆ ನಡೆದನು.

ಸಾಂ॥ ಜನುಮ ಮಾತ್ರದೆ ಹೊಲೆಯನಾದರೇನಾಯ್ತೈಯ್ಯ।
ಜನುಮವಾತನ ಕೈಯೊಳಿಹುದೆ? ॥
ಘನಮಹಿಮ ಹರಿಯ ಸಂಸ್ಮರಣಮಾತ್ರದೊಳವನು।
ವಿನುತಾತ್ಮನಾದಪನ್ನೈ ಮರುಳೆ ॥ ೧ ॥

---



## ೧೪. ಶಿವಾಲಯದ ಪೂಜಾರಿಯು.



ಜಯಪುರದ ರಾಜವಾಡೆಯಲ್ಲಿರುವ ಶಿವಾಲಯದ ಪೂಜಾರಿಗಳು ಮದುವೆ ಮಾಡಿಕೊಳ್ಳಕೂಡದೆಂದು ನಿರ್ಬಂಧವಿದ್ದಿತು. ಆದುದರಿಂದ ಬಹುಕಾಲದಿಂದಲೂ ಆ ಶಿವಾಲಯದ ಪೂಜಾರಿಯಾಗಲುಳ್ಳವನು ಅವಿವಾಹಿತನಾಗಿ ನಿಸ್ಸಂಗನಾಗಿ ಸದಾ ಈಶ್ವರಾರಾಧನೆಯಲ್ಲಿಯೇ ಕಾಲಕಳೆಯುವ ಪರಿಪಾಠವಿದ್ದಿತು. ಶಿವಾಲಯದ ನೆರೆಯಲ್ಲಿಯೇ ಪೂಜಾರಿಯು ಒಂದು ಸಣ್ಣ ಗುಡಿಸಲನ್ನು ಕಟ್ಟಿಕೊಂಡು ವಾಸವಾಗಿರುತ್ತಿದ್ದನು. ಅರಮನೆಯುಲ್ಲೊಂದು ಗುರುವಿನ ಮನೆಯಾಗಿದ್ದಿತು.

ಒಮ್ಮೆ ಅದೇನೋ ಒಂದು ಮಹತ್ವದ ಆಲೋಚನೆಯನ್ನು ಕೇಳಿಕೊಳ್ಳುವದರ ಸಲುವಾಗಿ ಜಯಪುರದ ಮಹಾರಾಜನು ಪೂಜಾರಿಯನ್ನು ಕರೆಯುವದಕ್ಕೆ ತನ್ನ ದೂತರನ್ನು ಕಳುಹಿಸಿದನು. ರಾಜದೂತರು ಬಂದು ಅರಸನ ಬಯಕೆಯನ್ನು ಅರುಹಲು ಪೂಜಾರಿಯು—“ನನಗೆ ರಾಜಸಭೆಗೆ ಬರುವ ಅವಶ್ಯಕತೆಯೇನೂ ಇರುವದಿಲ್ಲ. ರಾಜನಿಗೆ ನನ್ನನ್ನು ಕಾಣುವ ಬಯಕೆಯಿದ್ದರೆ ಅವನೇ ನನ್ನ ಗುಡಿಸಲಕ್ಕೆ ಬರಲಿ” ಎಂದು ನಿರಭಿಮಾನದಿಂದಲೂ ನಿರ್ಭಯದಿಂದಲೂ ನುಡಿದುಬಿಟ್ಟನು.

ರಾಜದೂತರು ನಿರ್ಕುಪಾಯರಾಗಿ ಮರಳಿ ಹೋಗಿ ಅರಸನೆದುರಿಗೆ ನಡೆದ ಸಂಗತಿಯನ್ನು ಅರುಹಿದರು. ಇದರಿಂದ ಅರಸನು ಮನಸ್ಸಿನಲ್ಲಿ ಕೊಂಚ ಕೋಪಗೊಂಡರೂ ಪೂಜಾರಿಗೆ ಏನು ತಾನೇ ಮಾಡಬಲ್ಲನು? ಪೂಜಾರಿಯು ಸರ್ವಸಂಗಪರಿತ್ಯಾಗ ಮಾಡಿದ ಸನ್ಯಾಸಿಯು. ಅವನಿಗೆ ಹಣಕಾಸುಗಳ ಆಶೆಯಿಲ್ಲ; ಭೂಮಿಕಾಣಿಗಳ ಬಯಕೆಯಿಲ್ಲ; ಮಾನಮರ್ಯಾದೆಗಳ ಅಭಿಮಾನವಿಲ್ಲ. ಅಂದಮೇಲೆ ಅವನಿಗೆ ಅರಸನ ಅಧಿಕಾರದ ಭೀತಿಯೇನು? ಆತನ ಸಂಪತ್ತಿನ ಹಂಗು ಏನು?

ಅರಸನಿಗೆ ಪೂಜಾರಿಯನ್ನು ನೋಡುವ ಕೆಲಸವೇ ಇದ್ದಿತಾದ್ದರಿಂದ ಅವನು ತಾನೇ ಆತನ ಗುಡಿಸಲಕ್ಕೆ ಬಂದು ತನ್ನ ಕೆಲಸವನ್ನು ಮಾಡಿಕೊಳ್ಳಬೇಕಾಯಿತು. ಅರಸನು ತನ್ನ ಅಧಿಕಾರ ವೈಭವಗಳನ್ನು ಈ ಪೂಜಾರಿಯು ಅಲ್ಲಗಳೆದನೆಂದೂ ತಾನೇ ದೀನನಾಗಿ ಅವನ ಗುಡಿಸಲಕ್ಕೆ ಹೋಗಬೇಕಾಯಿತೆಂದೂ ಮನಸ್ಸಿನಲ್ಲಿ ಚಿಂತಿಸತೊಡಗಿದನು. ಒಂದು ದಿನ ತನ್ನ ಮಂತ್ರಿಯನ್ನು ಕರೆಯಿಸಿ ಈ ವಿಚಾರವನ್ನು ಆತನಿಗೆ ತಿಳಿಸಿ ಏನಾದರೊಂದು ಉಪಾಯದಿಂದ ಪೂಜಾರಿಯ ಸೇಡು ತೀರಿಸಿಕೊಳ್ಳಬೇಕೆಂದ್ವು ಆಜ್ಞಾಪಿಸಿದನು.

ಮಂತ್ರಿಯು:—“ ಮಹಾರಾಜನೇ, ಇಷ್ಟು ಸಣ್ಣ ಮಾತಿಗಾಗಿ ಇಷ್ಟೊಂದು ಯೋಚಿಸುವುದೇತಕ್ಕೆ? ನಾನು ನಾಳೆಯೇ ಈ ಕಾರ್ಯಕ್ಕೆ ತೊಡಗುವೆನು ” ಎಂದು ನುಡಿದು ತನ್ನ ಮನೆಗೆ ನಡೆದನು.

ಅರಸನಿಗೆ ಈ ರೀತಿ ಸಮಾಧಾನವನ್ನು ಹೇಳಿ ಬಂದಬಳಿಕ ಮಂತ್ರಿಯು ಊರೊಳಗಿನ ತನ್ನ ಮಿತ್ರರಾದ ಕೆಲವರು ಬ್ರಾಹ್ಮಣರೊಡನೆ ಸಂಚುಮಾಡಿ ಶಿವಾಲಯದ ಪೂಜಾರಿಯ ಮನಸ್ಸಿನಲ್ಲಿ ಮದುವೆ ಮಾಡಿಕೊಳ್ಳಬೇಕೆಂಬ ಬಯಕೆಯನ್ನು ಹುಟ್ಟಿಸಿದನು. ಮಂತ್ರಿಯ ಆಲೋಚನೆಯ ಮೇರೆಗೆ ಪೂಜಾರಿಯ ವಿವಾಹಕ್ಕೆ ರಾಜಾಜ್ಞೆಯು ನಿರಾಯಾಸವಾಗಿ ದೊರೆಯಿತು. ಕನ್ಯೆಯನ್ನಂತೂ ಮೊದಲೇ ನೋಡಿ ಸಿದ್ಧಮಾಡಿದ್ದರು. ಪೂಜಾರಿಯ ಮದುವೆಯಾಗಿ ಆತನು ಗೃಹಸ್ಥಾಶ್ರಮಿಯಾದನು! ಮನೆಗೆ ಹೆಂಡತಿಯು ಬಂದೊಡನೆ ಪೂಜಾರಿಗೆ ತನ್ನ ಗುಡಿಸಲು ಸಾಲದೆನ್ನಿಸಿತು. ಪ್ರಪಂಚದ ಸಾಮಗ್ರಿಗಳೆಲ್ಲಾ ಬೇಕಾದವು. ಹಣಕಾಸುಗಳ ಆವಶ್ಯಕತೆಯುಂಟಾಯಿತು. ಭೂಮಿಕಾಣಿಗಳ ಮೇಲೆಯೂ ಮೋಹವುಂಟಾಯಿತು. ಪೂಜಾರಿಯು ಶಿವಾಲಯಕ್ಕಿಂತಲೂ ಅರಮನೆಯನ್ನೇ ಹೆಚ್ಚಿಗೆ ಪ್ರೀತಿಸತೊಡಗಿದನು. ಶಿವನ ದರುಶನಕ್ಕಿಂತಲೂ ಅರಸನ ದರುಶನದಲ್ಲಿಯೇ ಪೂಜಾರಿಯ ಮನಸ್ಸು ಹೆಚ್ಚು ಹಾತೊರೆಯತೊಡಗಿತು. ವ್ಯಾಮೋಹರಹಿತನಾಗಿ ಸ್ವತಂತ್ರನಾಗಿದ್ದ ಪೂಜಾರಿಯು ಪರತಂತ್ರನಾದನು. ಈಗ ಅರಸನಿಗೆ ಪೂಜಾರಿಯ ದರ್ಶನವು ಹೇಗೆ ದುರ್ಲಭವಾಗಬೇಕು? ಪ್ರತಿದಿನ ಬೆಳಗಾಗುವದರೊಳಗೆ ಪೂಜಾರಿಯು ಅರಮನೆಯ ಬಾಗಿಲಲ್ಲಿ ಜೀಯಾ ಎಂದು ಕೈಜೋಡಿಸಿಕೊಂಡು ನಿಂತಿರುವನು!

ಮುಂದೆ ಒಂದು ದಿನ ವಿಶ್ರಾಂತಿಯ ವೇಳೆಯಲ್ಲಿ ಅರಸನ ಬಳಿಗೆ ಮಂತ್ರಿಯು ಬಂದು “ ಮಹಾರಾಜನೇ, ಪೂಜಾರಿಯು ಈಗ ಹೇಗಿರುವನು? ” ಎಂದು ಕೇಳಿದನು. ಅರಸನು ಮುಗುಳುನಗೆಯಿಂದ ‘ ಸಂಸಾರಿಯಾದ ಪೂಜಾರಿಯು ಹೇಗೆ ಇರಬೇಕೋ ಹಾಗೆ ಇರುವನು ’ ಎಂದು ಉತ್ತರ ಹೇಳಿದನು.

ಸಾ॥ ಸತಿಸುತರ ಸಂಸಾರಬಂಧನದೆ ಸಿಲುಕದಾ ।
ಯತಿವರಗೆ ಕ್ಷಿತಿಪಾಲನೆಣೆಯೆ ॥
ಮತಿಹೀನನಾಗಿ ಸಂಸಾರದಲ್ಲುರುಳಲ್ಕೆ ।
ಅತಿದೀನನೆನಿಪನೈ—ಅವನು ॥ ೧ ॥

## ೧೫. ಕೋಮಟಿಗನೂ ಅವನ ಪುರೋಹಿತನೂ.



ಒಂದು ಊರಲ್ಲಿ ಒಬ್ಬ ಶ್ರೀಮಂತನಾದ ಕೋಮಟಿಗನಿದ್ದನು. ಅವನ ಅಂಗಡಿಯ ಭಾಂಡವಲವು ಐವತ್ತು ಸಾವಿರಕ್ಕೆ ಮಿಕ್ಕಿದ್ದಿತು. ತರ ತರದ ರೇಶಿಮೆಯ ಅರಿವೆಗಳು, ಸೀರೆ ಧೋತರಗಳು, ಮುಂತಾದ ವುಗಳನ್ನು ದಿನಾಲು ಮಾರುವನು; ಕೊಂಡುಕೊಳ್ಳುವನು. ಆ ಕೋಮಟಿಗೆ ಒಬ್ಬ ಆಚಾರಶೀಲನಾದ ಬ್ರಾಹ್ಮಣನು ಧರ್ಮ ಗುರುವಾಗಿದ್ದನು. ಬ್ರಾಹ್ಮಣನಿಗೆ ಹಣಕಾಸುಗಳ ಮೇಲೆ ಅಷ್ಟೊಂದು ಮಮತೆಯಿರ ಲಿಲ್ಲವಾಗಿ ಅವನ ಸಂಸಾರದ ಸಂಗ್ರಹವು ತೀರ ಕಡಿಮೆಯಾಗಿದ್ದಿತು. ತನಗೆ ಏನಾದ ರೊಂದು ಪದಾರ್ಥವು ಬೇಕೆನ್ನಿಸಿದರೆ ಆಗಾಗ ತನ್ನ ಶಿಷ್ಯರಲ್ಲಿ ಹೋಗಿ ಕೇಳಿ ತಂದು ಕೊಂಡು ಅಂದಿನ ಕಾರ್ಯವನ್ನು ನೀಗಿಸಿಕೊಳ್ಳುತ್ತಿದ್ದನು. ಒಂದು ದಿನ ಅವನಿಗೆ ತನ್ನ ಪಾರಾಯಣದ ಪುಸ್ತಕವನ್ನು ಕಟ್ಟುವದಕ್ಕೆ ಒಂದು ಮೊಳ ರೇಶಿಮೆಯ ಅರಿವೆಯು ಬೇಕಾಯಿತು. ಆಗ ಆತನು ಇದನ್ನು ಯಾವ ಶಿಷ್ಯನಲ್ಲಿ ಹೋಗಿ ದೊರಕಿಸಬಹುದೆಂದು ಆಲೋಚಿಸಿ ಕೊನೆಗೆ ತನ್ನ ಕೋಮಟಿಗ ಶಿಷ್ಯನ ಅಂಗಡಿಗೆ ನಡೆದನು.

ಎಂದೂ ಬಾರದ ಧರ್ಮಗುರುವು ತನ್ನ ಅಂಗಡಿಗೆ ಬಂದುದನ್ನು ನೋಡಿ ಕೋಮ ಟಿಗನಿಗೆ ತುಂಬಾ ಸಂತೋಷವಾಯಿತು. ಅವನು ಗುರುವನ್ನು ಚೆನ್ನಾಗಿ ಆದರದೊಡನೆ ಕುಳ್ಳಿರಿಸಿ ತನ್ನ ಅಂಗಡಿಯೊಳಗಿನ ವಿಧವಿಧದ ಸರಕನ್ನೆಲ್ಲ ತೋರಿಸಿ ತನ್ನ ವ್ಯಾಪಾರದ ಸ್ಥಿತಿಗತಿಗಳನ್ನೆಲ್ಲ ವರ್ಣಿಸಿ, ಜನರಲ್ಲಿ ವಿಶ್ವಾಸವು ಈಗೀಗ ಕಡಿಮೆಯಾಗಿರುವದೆಂದೂ ತಾನು ತುಂಬಾ ಸತ್ಯತೆಯಿಂದ ವ್ಯವಹಾರ ಮಾಡುತ್ತಿರುವೆನಾದರೂ ಜನರು ಯಾವಾ ಗಲೂ ಸರಕಿನ ಬೆಲೆಯಲ್ಲಿ ಪೈ, ಪೈ ಕಸರು ಮಾಡುತ್ತಿರುವರೆಂದೂ ನುಡಿದು ತನ್ನ ಸದ್ವ್ಯ ವಹಾರವನ್ನು ಪ್ರಶಂಸೆ ಮಾಡಿಕೊಂಡನು. ಧರ್ಮಗುರುವಿಗೆ ಈ ಎಲ್ಲ ಮಾತುಗಳಲ್ಲಿ ಕೆಲವು ತಿಳಿಯಲೇ ಇಲ್ಲ; ಕೆಲವುಗಳ ಕಡೆಗೆ ಆತನ ಲಕ್ಷ್ಯವೇ ಇರಲಿಲ್ಲ. ಆತನು ತನಗೆ ಒಂದು ಮೊಳ ರೇಶಿಮೆಯ ಅರಿವೆಯು ಪಾರಾಯಣದ ಪುಸ್ತಕವನ್ನು ಕಟ್ಟಿಡಲು ಬೇಕಾಗಿರುವದೆಂದೂ ಅದನ್ನಷ್ಟು ದಯವಿಟ್ಟು ಕೊಡಬೇಕೆಂದೂ ಕೇಳಿಕೊಂಡನು.

ಕೋಮಟಿಗನು ಧರ್ಮಗುರುವಿನ ವಿನಂತಿಯನ್ನು ಕೇಳಿ ವಿನಯದೊಡನೆ 'ಸ್ವಾಮೀ, ಇದೇನು? ತೀರ ಸಣ್ಣ ಮಾತು. ಇದನ್ನು ತಮಗೆ ಬೇಕಾದಾಗ ದೊರಕಿಸಿ ಕೊಡುವೆನು.' ಎಂದು ನುಡಿದು ಅಂಗಡಿಯೊಳಗೆಲ್ಲ ತಿರುಗಾಡಿ ಬಂದು, 'ಸ್ವಾಮೀ, ಕೊಂಚ ಅವ್ಯವಸ್ಥೆಯಾಗಿದೆ. ನಿನ್ನೆಯೇ ಒಂದು ಒಳ್ಳೆಯದಾದ ರೇಶಿಮೆಯ ಬಟ್ಟೆಯ ತುಂಡನ್ನು ಇಲ್ಲಿಯೇ ಇಟ್ಟಿದ್ದೆನು. ನಮ್ಮ ಆಳು ಯಾರಿಗೋ ಮಾರಿಬಿಟ್ಟಿರುವನು. ಒಂದು

ಮೊಳದ ಸಲುವಾಗಿ ದೊಡ್ಡ 'ಥಾನು' ಹರಿದುಕೊಡುವದು ವ್ಯಾಪಾರಧರ್ಮಕ್ಕೆ ಸರಿಯೆ ನಿಸುವದಿಲ್ಲ. ನಾನು ಇನ್ನೊಮ್ಮೆ ಅವಶ್ಯವಾಗಿ ನೆನಪಿನಲ್ಲಿಟ್ಟುಕೊಂಡು ತಮಗಾಗಿ ತೆಗೆದಿಟ್ಟುಕೊಡುವೆನು. ತಾವೂ ನಡುನಡುವೆ ನನಗೆ ಈ ಮಾತಿನ ನೆನಪು ಕೊಡುತ್ತಿರಿ. ಅಂದರೆ ನಿರಾಯಾಸವಾಗಿ ಕೆಲಸವಾಗುವದು. ” ಎಂದನು.

ಬ್ರಾಹ್ಮಣನು ಕೋಮಟಿಗನ ಅಂತರಂಗವನ್ನು ತಿಳಿದುಕೊಂಡು ಮರುಮಾತಾಡದೆ ‘ ಒಳ್ಳೇದಪ್ಪಾ, ಹೋಗಿಬರುತ್ತೇನೆ; ನಿನಗೆ ಅನುಕೂಲವಾದಾಗ ಒಂದು ಮೊಳ ಅರಿವೆಯನ್ನು ಮರೆಯದೆ ಕಳುಹಿಸಿಕೊಟ್ಟುಬಿಡು. ಅಂದರಾಯಿತು. ನಾನೆಲ್ಲಿ ಮೇಲಿಂದ ಮೇಲೆ ನಿನ್ನ ಅಂಗಡಿಗೆ ಬರಲಿ. ಇಂದು ಮಧ್ಯಾಹ್ನದಲ್ಲಿ ಎಂದಿನಂತೆ ಪಾರಾಯಣ ಮುಗಿಸಿ ಪುಸ್ತಕವನ್ನು ಕಟ್ಟುತ್ತಿರುವಾಗ ಅರಿವೆಯು ಹರಿದುಹೋಗಿ ಪುಸ್ತಕವನ್ನು ಕಟ್ಟುವದಕ್ಕೆ ಬಾರದಂತಾಗಿರುವುದನ್ನು ನೋಡಿ ಈಗ ನಿನ್ನಲ್ಲಿಗೆ ಬಂದಿದ್ದೆನು. ದುರ್ದೈವದಿಂದ ಅದು ದೊರೆಯಲಿಲ್ಲ. ಏನೋ ಈಶ್ವರೇಚ್ಛೆ ! ” ಎಂದು ನುಡಿದು ಹೊರಟುಹೋದನು.

ಕೋಮಟಿಗನ ಅಂಗಡಿಗೆ ಹೊಂದಿಯೇ ಹಿಂದೆ ಅವನ ಮನೆಯಿದ್ದಿತು. ಅಂಗಡಿಗೆ ತಮ್ಮ ಧರ್ಮಗುರುವು, ಎಂದೂ ಬಾರದವನು ಇಂದು ಬಂದಿರುವುದನ್ನು ಕೇಳಿ ಕೋಮಟಿಗನ ಹೆಂಡತಿಯು ಕೌತುಕದಿಂದ ಅಲ್ಲಿ ನಡೆಯುವದನ್ನೆಲ್ಲ ನೋಡುತ್ತಿದ್ದಳು. ಅವಳು ತನ್ನ ಗಂಡನ ಜೀನಸ್ವಭಾವ ( ಜಿಪುಣತನ ) ವನ್ನು ತಿಳಿದಿದ್ದಳಾದುದರಿಂದ ಅವರವರ ಸಂಭಾಷಣೆಯನ್ನು ಲಕ್ಷ್ಯಗೊಟ್ಟು ಆಲಿಸುತ್ತಲಿದ್ದಳು. ಕೊನೆಗೆ ಧರ್ಮಗುರುವು ಹತಾಶನಾಗಿ ಹೊರಟುಹೋದುದನ್ನು ನೋಡಿ ಅವಳಿಗೆ ತುಂಬಾ ದುಃಖವಾಯಿತು. ತನ್ನ ಗಂಡನ ಜೀನತನವನ್ನು ಕಂಡು ಅವಳ ಮನಸ್ಸು ಮರುಗಿತು. ಆದರೆ ಏನು ಮಾಡುವಳು? ಅವಳು ಹಿಂದೆ ಹಲವು ಸಾರೆ ಗಂಡನ ಈ ತರದ ಸ್ವಭಾವವನ್ನು ಮನಗಂಡಿದ್ದಳಾದುದರಿಂದಲೂ ಅದನ್ನು ಬದಲಿಸಲು ಯತ್ನಮಾಡಿ ಹತಾಶಳಾಗಿದ್ದುದರಿಂದಲೂ ಈ ಸಾರೆ ಅವಳು ಹೆಚ್ಚಿಗೆ ಏನೂ ಮಾತಾಡಲು ಬಯಸಲಿಲ್ಲ. ಧರ್ಮಗುರುವಾದ ಬ್ರಾಹ್ಮಣನು ಹೊರಟು ಹೋಗುವುದನ್ನು ನೋಡಿ ಕೂಡಲೆ ತನ್ನ ದಾಸಿಯನ್ನು ಕಳುಹಿಸಿ ಆತನನ್ನು ಮನೆಗೆ ಕರೆಯಿಸಿ, “ ಸ್ವಾಮೀ, ಯಜಮಾನರ ಭೆಟ್ಟಿಯಾಯಿತೇ? ತಮಗೆ ಬೇಕಾಗಿರುವ ಅರಿವೆಯು ನಾಳೆ ಬೆಳಿಗ್ಗೆ ತಮ್ಮ ಮನೆಗೆ ತಪ್ಪದೆ ಬರುವುದು. ಬೇಸರಾಗಬಾರದು, ಅವರ ಸ್ವಭಾವವೇ ಅಂಥದು. ಹುಟ್ಟಗುಣವದು. ” ಎಂದು ನುಡಿದು ನಮಸ್ಕಾರ ಮಾಡಿದಳು. ಆಗ ಬ್ರಾಹ್ಮಣನು “ ಮಹಾರಾಯಳೇ, ನಾನೇಕೆ ಬೇಸರಾಗಲಿ? ನನಗೆ ಅದರಿಂದ ಆಗಬೇಕಾದುದೇನು? ಆತನು ನನಗೆ ಆ ಅರಿವೆಯನ್ನು ಕೊಟ್ಟಿದ್ದರೆ ಆಗುವ ಸಂತೋಷವೂ ಅಷ್ಟೇ! ಈಗ ಆಗಿರುವ ವ್ಯಸನವೂ ಅಷ್ಟೇ. ಪರರ ಮನಸ್ಸಿನ ವಿರುದ್ಧವಾಗಿ ಕಾಡಿಬೇಡಿ ಸಂಸಾರಮಾಡುವ ಖೋಡಿತನವು ನನ್ನ ಪಾಲಿಗೆ ಬೇಡವೇ ಬೇಡ. ಒಳ್ಳೇದಮ್ಮಾ ಹೋಗಿಬರುತ್ತೇನೆ ” ಎಂದು ಮನೆಗೆ ನಡೆದನು.

ರಾತ್ರಿಯು ಹತ್ತು ಗಂಟೆಗೆ ಕೋಮಟಿಗನು ಅಂಗಡಿಯು ಲೆಕ್ಕವನ್ನೆಲ್ಲ ಮುಗಿಸಿ ಬಾಗಿಲು ಮುಚ್ಚಿ ಮನೆಗೆ ಬಂದನು. ಗಂಡನು ಮನೆಗೆ ಬಂದಕೂಡಲೆ ಯಜಮಾನಿತಿಯು ಮಿಕ್ಕ ಸಮಾಚಾರಗಳನ್ನೆಲ್ಲ ಕೇಳಿಕೊಂಡು "ತನಗೆ ಒಂದೊಂದು ಮೊಳದ ಎರಡು ಒಳ್ಳೆಯ ರೇಶಿಮೆಯ ಬಟ್ಟೆಗಳು ಈಗಲೇ ಬೇಕು." ಎಂದಳು. ಯಜಮಾನನು ನಿರುಪಾಯನಾದನು. ಏನಾದರೊಂದು ನೆವ ಹೇಳಲಿಕ್ಕೆ ಇದೇನು ಧರ್ಮಗುರುವಿನ ಬೇಡಿಕೆಯಾಗಿರಲಿಲ್ಲ; ಗೃಹಸ್ವಾಮಿನಿಯ ಆಜ್ಞೆಯಾಗಿದ್ದಿತು. ಕೋಮಟಿಗನು ಬೇರೆ ದಾರಿತೋರದೆ ಸುಮ್ಮನೆ ಆಗಲೇ ತಿರುಗಿಹೋಗಿ ಅಂಗಡಿಯ ಬಾಗಿಲು ತೆರೆದು ಎರಡು ಅರಿವೆಗಳನ್ನು ತಂದು ಮಡದಿಗೆ ಒಪ್ಪಿಸಿದನು.

ಮಾರನೆಯ ದಿನ ಬೆಳಿಗ್ಗೆ ಕೋಮಟಿಗನ ಪತ್ನಿಯು ತನ್ನ ದಾಸಿಯ ಕಡೆಗೆ ಆ ಅರಿವೆಗಳನ್ನು ಕೊಟ್ಟು ಧರ್ಮಗುರುವಿಗೆ ಮುಟ್ಟಿಸಿಬಾರೆಂದು ಕಳುಹಿಸಿದಳು. ಕೋಮಟಿಗನಿಗೂ ಈ ಮಾತು ತಿಳಿಯದಿರಲಿಲ್ಲ.

ತಮ್ಮ ಸಂಪತ್ತಿನ ಸದುಪಯೋಗವನ್ನು ತಿಳಿಯದ ಅಜ್ಞರ ಐಶ್ವರ್ಯವು ನಾಯಿಯ ಕಾವಲಲ್ಲಿರುವ ಗೋದಲೆಯಂತೆಯೇ ಸರಿ. ಗೋದಲೆಯಲ್ಲಿ ಸೇರಿಕೊಂಡ ನಾಯಿಯು ಅಲ್ಲಿರುವ ಮೇವನ್ನು ತಾನಂತೂ ತಿನ್ನಲಾರದು; ತಿನ್ನುವ ದನಗಳನ್ನೂ ಬೊಗಳಿ ಬೆದರಿಸಿ ಓಡಿಸುವುದು. ವಿವೇಕಿಗಳಾದವರು ಹೀಗೆ ಎಂದೂ ಮಾಡಲಾರರು. ಉಂಡು ತಿಂದು ಸತ್ಕಾರ್ಯಗಳಿಗೆ ಉಪಯೋಗಿಸಿ ಸಜ್ಜನರ ಸಹಾಯಕ್ಕಾಗಿ ವಿನಿಯೋಗಿಸುವದೇ ತಮ್ಮ ಸಂಪತ್ತಿನ ಉಪಯೋಗವೆಂಬದನ್ನು ಅವರು ತಿಳಿದು ನಡೆಯುವರು.

**ಸಾಂ॥ ದಾನಕ್ಕೆ ಕೊಡಲಿಲ್ಲ ದಂಡಕ್ಕೆ ಬಿಡಲಿಲ್ಲ।**
**ಜ್ಞಾನವಿಲ್ಲದರ ಸಿರಿಯಂತೆ॥**
**ಜ್ಞಾನಿಗಳ ಧನಕನಕವಾಗುವುದೆ ಜಗದೊಳಗೆ।**
**ದಾನಧರ್ಮದಸು ಗತಿಯದಕೆ॥ ೧॥**



## ೧೬. ವ್ರತಸ್ಥನಾದ ಬ್ರಾಹ್ಮಣನು.



ಒಂದು ದಿನ ಶ್ರೀರಾಮಕೃಷ್ಣ ಪರಮಹಂಸರು ತಮ್ಮ ಶಿಷ್ಯರೊಡನೆ ಸಂಚಾರಕ್ಕೆ ಹೊರಟರು. ದಾರಿಯಲ್ಲೊಂದು ಬ್ರಾಹ್ಮಣನ ಮನೆಯನ್ನು ನೋಡಿದರು. ಶಿಷ್ಯರು ಈ ಬ್ರಾಹ್ಮಣನ ಮನೆಯಲ್ಲಿ ಯಾವುದೋ ಒಂದು ವ್ರತವು ನಡೆದಿರುವದೆಂದೂ ತಾವೆಲ್ಲರೂ ಅಲ್ಲಿಗೆ ಹೋಗೋಣವೆಂದೂ ಹೇಳಿದರು. ಆಗ ಸ್ವಾಮಿಗಳು ಸಮ್ಮತಿಸದೆ ಮುಂದೆ ನಡೆದರು. ದಾರಿಯಲ್ಲಿ ಅವರು ತಮ್ಮ ಶಿಷ್ಯರಿಗೊಂದು ಕಥೆಯನ್ನು ಹೇಳಿದರು.

“ ಒಂದು ವಿಶಾಲವಾಗಿ ಬೆಳೆದ ಗಿಡದ ಬೊಡ್ಡೆಯೊಳಗಿನ ಹೊದರಿನಲ್ಲಿ ಒಂದು ಮುಂಗುಲಿಯು ಮನೆಮಾಡಿಕೊಂಡಿದ್ದಿತು. ಅದು ತನ್ನ ಆಹಾರಕ್ಕಾಗಿ ಆಗಾಗ ಹೊರಗೆ ಬಂದು ಗಿಡ ಇಳಿದು ಅತ್ತಿತ್ತ ಅಡ್ಡಾಡುವದು. ಆಗ ಏನಾದರೊಂದು ಭಯದ ಸೂಚನೆಯಾದೊಡನೆ ಓಡುತ್ತ ಹೋಗಿ ಗಿಡವನ್ನೇರಿ ಗೂಡು ಸೇರಿಕೊಳ್ಳುವದು. ಆಗ ಅದಕ್ಕೆ ನಿರ್ಭಯವಾಗುವದು. ಆ ಮುಂಗಲಿಯನ್ನು ನೋಡಿದ ನನಗೆ ಮನುಷ್ಯನ ಅವಸ್ಥೆಯೂ ಹೀಗೆಯೇ ಇರುವದೆಂದು ತೋರಿತು. ಭಗವಂತನ ಆಶ್ರಯವು ನಿರ್ಭಯವಾದ ಸ್ಥಳವು. ಅಲ್ಲಿ ಪ್ರಾಣಿಗಳಿಗೆ ಯಾತರಿಂದಲೂ ಭಯಭೀತಿಗಳಿರವು. ಅವುಗಳಿಗೆ ಜನನಮರಣಗಳ ಬಾಧೆಯೂ ಬಾಧಿಸದು. ದಾರಿದ್ರ್ಯ ದುಃಖಾದಿ ಪ್ರಾಪಂಚಿಕ ಸಂಕಟಗಳಂತೂ ಅಲ್ಲಿ ಇಲ್ಲವೇ ಇಲ್ಲ. ಮನುಷ್ಯನು ಸಂಸಾರದಲ್ಲಿದ್ದುಕೊಂಡು ಹೆಣ್ಣು-ಹೊನ್ನು-ಮಣ್ಣುಗಳ ಕೊಳೆಪಾಟಿನಲ್ಲಿ ಬಿದ್ದು ತೊಳಲಾಡುತ್ತಿರುವಾಗ ಆಹಾರಕ್ಕಾಗಿ ಹೊರಟಿರುವ ಮುಂಗುಲಿಯಂತೆ ಅಡಿಗಡಿಗೆ ಪ್ರಾಣಭಯವೂ ಅನೇಕ ವಿಧದ ಸಂಕಟಗಳೂ ಒದಗುತ್ತಿರುವವು. ಆಗ ಅವನು ತನ್ನ ನಿರ್ಭಯಸ್ಥಾನವಾದ ಭಗವಂತನ ಆಶ್ರಯವನ್ನು ಸೇರಿ ವಿಶ್ರಾಂತಿ ಪಡೆಯುವನು. “ ಸಂಕಟ ಬಂದಾಗ ವೆಂಕಟರಮಣ ” ಎನ್ನುವುದರ ಮಥಿತಾರ್ಥವೂ ಕೂಡ ಇದೇ ಸರಿ. ಈ ಬಡಬ್ರಾಹ್ಮಣನ ಅವಸ್ಥೆಯೂ ಈಗ ಹೀಗೆಯೇ ಆಗಿದೆ. ಅವನ ಸಂಸಾರದಲ್ಲಿ ಅವುದೋ ಒಂದು ವಿಪತ್ತು ಒದಗಿ ಬಂದಿರುವುದರಿಂದ ಅವನು ಭಗವಂತನ ಆಶ್ರಯವನ್ನು ಕೋರಿ ಏನೋ ಒಂದು ಮಹಾವ್ರತವನ್ನು ಆರಂಭಿಸಿರುವನು. ಈ ವಿಪತ್ತು ಕಳೆದೊಡನೆಯೇ ಆ ವ್ರತವನ್ನೂ ಮರೆಯುವನು. ಆ ಭಗವಂತನನ್ನೂ ಮರೆತುಬಿಡುವನು. ”

**ಸಾಂ॥ ಆಪನ್ನಿವಾರಕ ಹರಿಯ ಸಂಸ್ಮರಣೆಯಿಂ ।**
**ಪಾಪನ್ನಿವಾರಣೆವಡೆದು ॥**
**ತಾಪತ್ರಯಂಗಳೊಳುರುಳುವ ಮಾನವರ ।**
**ಪಾಪ ಪರಿಹಾರವೆಂತಹುದೈ ॥ ೧ ॥**

## ೧೭. ಚಾಪಾಕ್ಷನಾದ ಅರ್ಜುನನು.



ಪರಶುರಾಮ ಶಿಷ್ಯನೂ ಅಸ್ತ್ರವಿದ್ಯಾಗುರುವೂ ಆದ ದ್ರೋಣಾಚಾರ್ಯನು ತನ್ನ ಬಾಲ್ಯದ ಗೆಳೆಯನಾದ ದ್ರುಪದರಾಜನಿಂದ ಅವಮಾನಿತನಾಗಿ ಹಸ್ತಿನಾವತಿಗೆ ಬಂದು ಪಾಂಡವಪಿತಾಮಹನಾದ ಭೀಷ್ಮಾಚಾರ್ಯನ ಆಶ್ರಯದಲ್ಲಿದ್ದುಕೊಂಡು ಕೌರವ ಪಾಂಡವರಿಗೆ ಅಸ್ತ್ರವಿದ್ಯೆಯನ್ನು ಕಲಿಸತೊಡಗಿದನು. ನೂರು ಮಂದಿ ಕೌರವರೂ ಐವರು ಪಾಂಡವರೂ ಗುರುವಿನಲ್ಲಿ ವಿದ್ಯೆಯನ್ನು ಕಲಿಯುತ್ತ ಸುಖವಾಗಿದ್ದರು. ಅವರೆಲ್ಲರಲ್ಲಿ ಅರ್ಜುನನು ಆಚಾರ್ಯರ ಪ್ರಿಯಶಿಷ್ಯನೆನಿಸಿಕೊಂಡನು. ಈ ಸಂಗತಿಯು ಕ್ರಮವಾಗಿ ಧೃತರಾಷ್ಟ್ರನವರೆಗೂ ಮುಟ್ಟಿತು. ಹೆತ್ತವರಿಗೆ ಹೆಗ್ಗಣ ಮುದ್ದಾಗಿರುವಂತೆ ತನ್ನ ಮಕ್ಕಳು ಮಿಕ್ಕವರಿಗಿಂತಲೂ ಹೆಚ್ಚಿನವರೆನಿಸಿಕೊಳ್ಳಬೇಕೆಂಬ ಬಯಕೆಯು ಧೃತರಾಷ್ಟ್ರನಲ್ಲಿಯೂ ಇದ್ದಿತು. ಒಂದು ದಿವಸ ಅವನು ದ್ರೋಣಾಚಾರ್ಯರ ಸಂಗಡ ಮಾತನಾಡುತ್ತ ಕುಳಿತಿರುವಾಗ ಮಾತಿನ ಮೇಲೆ ಮಾತು ಹೊರಟು ಅರ್ಜುನನ ವಿಷಯವು ಬಂದಿತು. ಕೌರವರಲ್ಲಿಯೂ ಪಾಂಡವರಲ್ಲಿಯೂ ಅರ್ಜುನನೇ ಅಪ್ರತಿಮ ವೀರನೆನ್ನಿಸಿಕೊಳ್ಳವನೆಂದೂ ಅವನ ಗ್ರಹಣಶಕ್ತಿಯು ಅಪ್ರತಿಮವಾಗಿರುವದೆಂತಲೂ ಆಚಾರ್ಯರು ಅರ್ಜುನನನ್ನು ಬಣ್ಣಿಸಿ ನುಡಿದರು. ಅರ್ಜುನನ ವಿಷಯವಾದ ಈ ಮಾತುಗಳು ಅಕ್ಷರಶಃ ನಿಜವಾಗಿದ್ದರೂ ಧೃತರಾಷ್ಟ್ರನಿಗೆ ಸಹನವಾಗಲಿಲ್ಲ. ತನ್ನ ಹಿರಿಯ ಮಗ ದುರ್ಯೋಧನನೇ ಹೆಚ್ಚಿನವನೆನ್ನಿಸಿಕೊಳ್ಳಬೇಕೆಂಬದು ಅವನ ಬಯಕೆಯಾಗಿದ್ದಿತು.

ಧೃತರಾಷ್ಟ್ರನು ದ್ರೋಣಾಚಾರ್ಯರ ಮುಂದೆ ಅರ್ಜುನನ ವಿಷಯದ ಮತ್ಸರವನ್ನು ತೋರ್ಪಡಿಸಲಿಲ್ಲ; ಆದರೆ ತನ್ನ ಮಗನ ವಿಷಯದಲ್ಲಿರುವ ಅಭಿಮಾನವಾತ್ಸಲ್ಯಗಳನ್ನು ಮಾತ್ರ ಮುಚ್ಚಿಡುವದು ಸಾಧ್ಯವಾಗಲಿಲ್ಲ. ಅವನು “ ಆಚಾರ್ಯರೇ, ಪಾಂಡುಪುತ್ರನಾದ ಅರ್ಜುನನು ಅಪ್ರತಿಮ ವೀರನೆನ್ನಿಸಿಕೊಳ್ಳುವನೆಂಬದನ್ನು ಕೇಳಿ ನನಗೆ ತುಂಬಾ ಸಂತೋಷವಾಯಿತು. ಅವನೂ ಕುರುಕುಲದಲ್ಲಿ ಜನ್ಮಿಸಿದವನೇ ಅಲ್ಲವೆ? ಆದರೆ ತಮ್ಮ ಬಳಿಯಲ್ಲಿ ನನ್ನದೊಂದು ವಿಜ್ಞಾಪನೆಯಿದೆ. ತಮ್ಮ ವಿದ್ಯಾಲಯದಲ್ಲಿ ಬಹುಜನ ಶಿಷ್ಯರಿರುವರು. ತಾವು ಎಲ್ಲರನ್ನೂ ಸಮಭಾವದಿಂದ ನೋಡಿ ಎಲ್ಲರಿಗೂ ಸರಿಯಾಗಿ ಉಪದೇಶ ಮಾಡುತ್ತಿರುವಿರಿ. ಹೀಗಿದ್ದರೂ ಆ ವಿದ್ಯೆಯನ್ನು ಎಲ್ಲರೂ ಸರಿಯಾಗಿ ಗ್ರಹಣಮಾಡುವದೂ ಎಲ್ಲರೂ ಅಷ್ಟೇ ಜಾಣರಾಗುವದೂ ಸಂಭವನೀಯವಲ್ಲ; ಅವರೆಲ್ಲರೂ ತಮ್ಮ ತಮ್ಮ ಯೋಗ್ಯತೆಯಂತೆ ವಿದ್ಯಾಗ್ರಹಣ ಮಾಡಿ ಬೇರೆ ಬೇರೆ ಯೋಗ್ಯತೆಯನ್ನು ಹೊಂದುವರೆಂಬದು ಸಹಜವೇ ಸರಿ. ಆದರೆ ಆ ನಿಮ್ಮ ಶಿಷ್ಯರೆಲ್ಲರಿಗೆ

ತಿಳಿಯದಿರುವ ವಿಶೇಷವಾದ ಯಾವದೊಂದು ವಿದ್ಯೆಯನ್ನು ನನ್ನ ಮಗ ದುರ್ಯೋಧನ ನಿಗೆ ಕಲಿಸಬೇಕೆಂದು ನನ್ನ ಪ್ರಾರ್ಥನೆಯಿದೆ.” ಎಂದು ವಿಜ್ಞಾಪಿಸಿಕೊಂಡನು.

ದ್ರೋಣಾಚಾರ್ಯರು ಧೃತರಾಷ್ಟ್ರನ ಅಂತರಂಗವನ್ನು ಅರಿಶುಕೊಂಡರು. ಅವರು ಒಳ್ಳೆಯದೆಂದು ನುಡಿದು ಸುಮ್ಮನಾದರು.

ಒಂದೇ ವಿದ್ಯಾಶಾಲೆಯಲ್ಲಿ ಓದುತ್ತಿರುವ ವಿದ್ಯಾರ್ಥಿಗಳಲ್ಲಿ ಮಿಕ್ಕವರನ್ನೆಲ್ಲ ವಂಚಿಸಿ ದುರ್ಯೋಧನನಿಗೊಬ್ಬನಿಗೇ ವಿಶಿಷ್ಟವಾದೊಂದು ವಿದ್ಯೆಯನ್ನು ಕಲಿಸುವದು ಸುಲಭವಾಗಿರಲಿಲ್ಲ. ವಿದ್ಯಾರ್ಥಿಗಳೆಲ್ಲರೂ ಹಗಲಿರಳು ಒಂದೇ ಕಡೆಯಲ್ಲಿ ಕೂಡಿ ಇರುವರು. ಆಚಾರ್ಯರೂ ಕೂಡ ಅವರ ಸಂಗಡಲೇ ಇರುವರು. ಇಂತಿರುವಾಗ ಧೃತರಾಷ್ಟ್ರನ ಬಯಕೆಯು ಈಡೇರುವ ಬಗೆ ಹೇಗೆ? ಅದರಲ್ಲಿಯೂ ಅರ್ಜುನನಂಥ ಚಾಣಾಕ್ಷ ಶಿಷ್ಯನು ಆಚಾರ್ಯರನ್ನು ನೆರಳಿನಂತೆ ಅನುಸರಿಸಿರುವನು.

ಒಂದು ದಿನ ಆಚಾರ್ಯರು ತಮ್ಮ ಶಿಷ್ಯರೊಂದಿಗೆ ಗಂಗಾತೀರಕ್ಕೆ ಹೊರಟರು. ಒಂದೆರಡು ಹರದಾರಿ ನಡೆದ ಬಳಿಕ ಆಚಾರ್ಯರು ಅರ್ಜುನನ್ನು ಕುರಿತು—“ ತಮ್ಮಾ, ಗಂಗಾತೀರಕ್ಕೆ ಹೊರಟಿರುವ ನಾವು ಅಲ್ಲಿ ಸ್ನಾನಸಂಧ್ಯಾದಿಗಳನ್ನು ತೀರಿಸಿಕೊಳ್ಳದೆ ತಿರುಗಿ ಬರುವದು ಸರಿಯೆನಿಸುವದಿಲ್ಲ. ನಾನು ದೇವರ ಪೆಟ್ಟಿಗೆಯನ್ನು ಮರೆತು ಬಂದಿರುವೆನು. ಬೇಗನೆ ಮನೆಗೆ ಹೋಗಿ ಅದನ್ನು ತೆಗೆದುಕೊಂಡು ಬಾ. ಬರುವಾಗ ದಾರಿಯಲ್ಲಿ ಅದನ್ನು ಕೆಳಗೆ ಇಡಕೂಡದು, ಎಚ್ಚರಿಕೆ!” ಎಂದರು.

ಅರ್ಜುನನು ಆಚಾರ್ಯರ ಬಾಯಿಯಿಂದ ಹೊರಟ ವಾಕ್ಯಗಳನ್ನು ಕೇಳಿದೊಡನೆ ತಿರುಗಿ ಮನೆಗೆ ಹೊರಟನು. ಅವನು ಹೊರಟು ಹೋದೊಡನೆ ಆಚಾರ್ಯರ ಮನಸ್ಸಿನೊಳಗಿನ ಮುಕ್ಕಾಲು ಪಾಲು ಯೋಚನೆಯು ಕಡಿಮೆಯಾಯಿತು. ಮಿಕ್ಕ ಶಿಷ್ಯರನ್ನು ಮರೆಮಾಜುವದು ಅವರಿಗೆ ಅಷ್ಟೊಂದು ಕಠಿಣವಾಗಿರಲಿಲ್ಲ. ಮಾತು ಮಾತಾಡುತ್ತ ಕೌರವನೂ ಆಚಾರ್ಯರೂ ಹಿಂದೆ ಉಳಿದರು. ಮಿಕ್ಕವರೆಲ್ಲ ಮುಂದೆ ನಡೆದರು. ಈ ಸಂಧಿಯಲ್ಲಿ ಆಚಾರ್ಯರು ಕೌರವನಿಗೆ ಒಂದು ಮಂತ್ರವನ್ನು ಉಪದೇಶಿಸಿದರು. ಗುರುಮುಖದಿಂದ ಹೊರಟ ಮಂತ್ರವನ್ನು ತತ್‌ಕ್ಷಣ ಸ್ವೀಕರಿಸಿ ಬಿಡುವಷ್ಟು ಯೋಗ್ಯತೆಯು ಅವನಲ್ಲಿರಲ್ಲಿಲ್ಲವಾದುದರಿಂದ ಅವನು ಆ ಮಂತ್ರವನ್ನು ಬೀಜಾಕ್ಷರಗಳೊಂದಿಗೆ ನೆಲದ ಮೇಲೆ ಬರೆದುಕೊಂಡು ಪಾಠ ಮಾಡಿದನು. ಬಳಿಕ ಆಚಾರ್ಯರು “ ದುರ್ಯೋಧನಾ, ನೀನು ಈ ಮಂತ್ರವನ್ನು ಜಪಿಸುತ್ತ ಎದುರಿನ ಗಿಡದ ಮೇಲೆ ಬಾಣಪ್ರಯೋಗ ಮಾಡು” ಎಂದರು. ದುರ್ಯೋಧನನು ಅದರಂತೆ ಮಾಡಲು ಆ ಗಿಡದ ಎಲ್ಲ ಎಲೆಗಳಿಗೂ ಒಂದೊಂದು ತೂತು ಬಿದ್ದಿತು. ಪುನಃ ಅದರಂತೆ ಮಾಡಲು ಪುನಃ ಎಲ್ಲ ಎಲೆಗಳಿಗೆ ಮತ್ತೊಂದು ತೂತು ಬಿದ್ದಿತು. ಬಳಿಕ ಆಚಾರ್ಯರು “ ನೀನು ಈ ಮಂತ್ರವನ್ನು ಸರಿಯಾಗಿ ಪಾಠ ಮಾಡಿಕೊಂಡು ಬಾ. ಈ ಮಂತ್ರದ ಮಹಿಮೆಯಿಂದ ಒಂದೇ ಬಾಣ

ದಿಂದ ಗಿಡದ ಎಲ್ಲ ಎಲೆಗಳಿಗೂ ತೂತು ಬಿದ್ದಂತೆ ನಿನ್ನ ವೈರಿಗಳ ಸೈನ್ಯದೊಳಗಿನ ಪ್ರತಿ ಯೊಬ್ಬ ಸೈನಿಕನ ಮೈಯೂ ಛಿದ್ರ ಛಿದ್ರವಾಗುವದು. ನಾನು ಮುಂದೆ ಹೋಗಿ ಮಿಕ್ಕ ಶಿಷ್ಯರನ್ನು ಕೂಡಿಕೊಳ್ಳುವೆನು. ಇಲ್ಲವಾದರೆ ಅವರು ನನ್ನನ್ನು ಶೋಧಿಸುತ್ತ ಇಲ್ಲಿಗೆ ಬಂದರೂ ಬರಬಹುದು." ಎಂದು ನುಡಿದು ಮುಂದೆ ನಡೆದರು. ದುರ್ಯೋಧನನು ಹಿಂದೆ ಉಳಿದು ಆ ಮಂತ್ರವನ್ನು ಪುನಃ ಸರಿಯಾಗಿ ಪಾಠಮಾಡಿಕೊಂಡು ಮುಂದೆ ನಡೆದು ಮಿಕ್ಕವರನ್ನು ಕೂಡಿಕೊಂಡನು. ದ್ರೋಣಾಚಾರ್ಯರಿಗೆ ತಮ್ಮ ಈ ವಂಚ ನೆಯ ಕೃತಿಯಿಂದ ಅಸಮಾಧಾನವಾಗಿದ್ದರೂ ಧೃತರಾಷ್ಟ್ರನ ದಾಕ್ಷಿಣಕ್ಕೆ ಒಳಗಾಗಿ ಒಪ್ಪಿಕೊಂಡ ವಿಚಾರವು ಸಾಧ್ಯವಾದುದರಿಂದ ತುಸು ಸಂತೋಷವಾಯಿತು.

ಅರ್ಜುನನು ತಿರುಗಿ ಮನೆಗೆ ಹೋಗಿ ದೇವರ ಪೆಟ್ಟಿಗೆಯನ್ನು ತೆಗೆದುಕೊಂಡು ಗಂಗಾತೀರಕ್ಕೆ ಬಂದು ಮುಟ್ಟಿದನು. ಅರ್ಜುನನು ಬಂದೊಡನೆಯೇ ಆಚಾರ್ಯರು:— "ಅರ್ಜುನಾ, ದೇವರ ಪೆಟ್ಟಿಗೆಯನ್ನು ತಂದೆಯಾ, ದಾರಿಯಲ್ಲಿ ಯಾಕೋ ತುಸು ಅವಕಾ ಶವಾದಂತೆ ತೋರುತ್ತದೆ?" ಎಂದರು. ಅರ್ಜುನನು ನಕ್ಕು ದಾರಿಯಲ್ಲೊಂದು ಹೊಸ ವಿದ್ಯೆಯನ್ನು ಅಭ್ಯಾಸ ಮಾಡಿಕೊಂಡು ಗುರುಗಳಿಗೆ ತಡವಾಗಿ ತೊಂದರೆಯಾಗಬಾರ ದೆಂದು ಓಡುತ್ತ ಬಂದೆನು. ಆದರೂ ತುಸು ಅವಕಾಶವಾದುದಕ್ಕಾಗಿ ನನ್ನನ್ನು ಕ್ಷಮಿಸ ಬೇಕು" ಎಂದು ಬೇಡಿಕೊಂಡನು.

ಆಚಾರ್ಯರು:—ಅರ್ಜುನಾ, ಅದಾವ ವಿದ್ಯೆ? ದಾರಿಯಲ್ಲಿ ಇನ್ನಾರು ಕೂಡಿದರು?

ಅರ್ಜುನನು—"ಆಚಾರ್ಯರೇ, ನನಗೆ ತಮ್ಮ ಹೊರತು ವಿದ್ಯೆಯನ್ನು ಪದೇಶಿ ಸುವವರು ಇನ್ನಾರಿದ್ದಾರೆ? ಅನಾಯಾಸವಾಗಿ ಲಭ್ಯವಾಗಿರುವ ವಿದ್ಯೆಯನ್ನೂ ತಮ್ಮ ಹೆಸರಿನಿಂದಲೇ ಸಂಗ್ರಹಿಸಿಕೊಂಡು ಬಂದಿರುವೆನು." ಎಂದು ನುಡಿದು ತನ್ನ ಬಿಲ್ಲಿಗೆ ಒಂದು ಬಾಣವನ್ನು ಹೂಡಿ ಇದಿರಿಗಿರುವ ಗಿಡಕ್ಕೆ ಎಸೆದನು. ಕೂಡಲೆ ಆ ಗಿಡದ ಎಲ್ಲ ಎಲೆಗಳಿಗೆ ಒಂದೊಂದು ತೂತು ಬಿದ್ದಿತು. ಇದನ್ನು ನೋಡಿ ಆಚಾರ್ಯರು ಬೆರಗಾಗಿ "ಅರ್ಜುನಾ, ನಿನಗೆ ಈ ವಿದ್ಯೆಯನ್ನು ಯಾರು ಕಲಿಸಿದರು" ಎಂದು ಕೇಳಿದರು.

ಅರ್ಜುನನು ನಡೆದ ಸಂಗತಿಯನ್ನೆಲ್ಲ ಈ ರೀತಿ ವಿವರಿಸಿದನು:—

"ನಾನು ತಮ್ಮ ಅಪ್ಪಣೆಯ ಮೇರೆಗೆ ತಿರುಗಿ ಹೋಗಿ ದೇವರ ಪೆಟ್ಟಿಗೆಯನ್ನು ತೆಗೆದುಕೊಂಡು ಬರುವಾಗ ದಾರಿಯಲ್ಲಿ ಕೆಲವು ಗಿಡಗಳ ಎಲ್ಲ ಎಲೆಗಳಿಗೆ ಒಂದೊಂದು ಎರಡೆರಡು ಛಿದ್ರಗಳಾಗಿರುವದನ್ನು ನೋಡಿದೆನು. ಆಗ ನನಗೆ ಆಶ್ಚರ್ಯವಾಯಿತು. ಈ ವಿದ್ಯೆಯೊಂದು ನನಗೆ ಸಾಧ್ಯವಾಗಿದ್ದರೆ ಒಳ್ಳೆಯದಾಗುತ್ತಿತ್ತೆಂದು ಯೋಚಿಸಿ ತಮ್ಮ ಪಾದಗಳನ್ನು ಭಕ್ತಿಪೂರ್ವಕವಾಗಿ ಸ್ಮರಿಸುತ್ತ ಮುಂದೆ ಸಾಗುತ್ತಿರಲು ಒಂದು ಕಡೆಗೆ ದುರ್ಯೋಧನನ ಕೈಬರಹದಿಂದ ನೆಲದ ಮೇಲೆ ಕೆಲವು ಮಂತ್ರಾಕ್ಷರಗಳು ಬರೆ ದಿರುವದನ್ನು ನೋಡಿದೆನು. ಆಗ ಪುನಃ ತಮ್ಮ ಪಾದಗಳನ್ನು ಸ್ಮರಿಸಿ ಆ ಮಂತ್ರಾಕ್ಷರ

ಗಳನ್ನು ಪಾಠಮಾಡಿಕೊಂಡೆನು. ಆ ಮೇಲೆ ಆ ಮಂತ್ರವನ್ನು ಜಪಿಸಿ ಎದುರಿನ ಗಿಡಕ್ಕೆ ಬಾಣ ಪ್ರಯೋಗಮಾಡಲು ಆ ಗಿಡದ ಎಲೆಗಳಿಗೆಲ್ಲಾ ಒಂದೊಂದು ತೂತು ಬಿದ್ದಿತು."

ಆಚಾರ್ಯರು:—ಅರ್ಜುನಾ, ನನ್ನ ದೇವರ ಪೆಟ್ಟಿಗೆಯು ಅವಸ್ಥೆಯೇನಾಯಿತು? ನಾನು ಅದನ್ನು ನೆಲದ ಮೇಲೆ ಇಡಕೂಡದೆಂದು ಹೇಳಿರಲಿಲ್ಲವೇ?

ಅರ್ಜುನ:—ಸ್ವಾಮೀ, ಕ್ಷಮಿಸಬೇಕು. ನಾನು ಎಂದೂ ತಮ್ಮ ಅಪ್ಪಣೆಗೆ ವಿರೋಧವಾಗಿ ನಡೆದವನಲ್ಲ. ಇಂದೂ ನಡೆಯಲಿಲ್ಲ. ಬಾಣ ಪ್ರಯೋಗ ಮಾಡುವಾಗ ನಾನು ದೇವರ ಪೆಟ್ಟಿಗೆಯನ್ನು ಮೊಣಕಾಲುಗಳ ನಡುವೆ ಅವುಕಿ ಹಿಡಿದುಕೊಂಡಿದ್ದೆನು.

ಆಚಾರ್ಯರಿಗೆ ಒಮ್ಮೆ ದೈವಗತಿಯನ್ನು ಯೋಚಿಸಿ ಆಶ್ಚರ್ಯವಾಯಿತು. ಮತ್ತೊಮ್ಮೆ ಅರ್ಜುನನ ಬುದ್ಧಿಕೌಶಲ್ಯವನ್ನೂ ಗುರುಭಕ್ತಿಯನ್ನೂ ನೋಡಿ ಆನಂದವಾಯಿತು. ಅವರು ದುರ್ಯೋಧನನ ಮುಖವನ್ನು ನೋಡಿದರು.

ದುರ್ಯೋಧನನು ಆಚಾರ್ಯರ ಭಾವನೆಯನ್ನು ಕಂಡುಕೊಂಡನು. ಅವನು ಗುರುಗಳೇ, ಅರ್ಜುನನೂ ನಮ್ಮೊಳಗಿನವನೇ ಅಲ್ಲವೇ? ಈ ವಿದ್ಯೆಯು ಅರ್ಜುನನ ವಶವಾದುದು ಒಂದು ರೀತಿಯಿಂದ ಒಳ್ಳೆಯದೇ ಆಯಿತು. "ಇನ್ನಾರಿಗಾದರೂ ದೊರೆತಿದ್ದರೆ ಮಾತ್ರ ನಾವು ವಿಷಾದಪಡಬೇಕಾಗುತ್ತಿತ್ತು. ಎಂದು ತನ್ನ ದೋಷವನ್ನು ಮರೆಮಾಡಿಕೊಂಡು ಮಾತಾಡಿದನು.

ಆಚಾರ್ಯ:—ಅರ್ಜುನಾ, ನೀನೂ ದುರ್ಯೋಧನನಂತೆಯೇ ದುರ್ಲಕ್ಷ್ಯದಿಂದ ಆ ಮಂತ್ರಾಕ್ಷರಗಳನ್ನು ಅಳಿಸದೆ ಬಿಟ್ಟು ಬಂದಿರುವೆಯಾ?

ಅರ್ಜುನ:—ಇಲ್ಲ. ಮಂತ್ರಾಕ್ಷರಗಳನ್ನು ನೆಲದ ಮೇಲೆ ಬರೆದುದು ಮೊದಲನೆಯ ತಪ್ಪು. ಅನಿವಾರ್ಯಹಕ್ಕಾಗಿ ಬರೆದು ಕೊಂಡರೂ ಅದನ್ನು ಅಳಿಸದೆ ಬಿಟ್ಟು ಬಂದುದು ಎರಡನೆಯ ದೋಷವು. ಗುರುಕೃಪಾಪ್ರಸಾದದಿಂದ ಆ ಮಂತ್ರವು ಸಿದ್ಧಿಸಿದೊಡನೆ ನಾನು ಅದನ್ನು ಅಳಿಸಿ ಬಂದಿರುವೆನು.

ಆಚಾರ್ಯರು ಆನಂದದಿಂದ ಅರ್ಜುನನ್ನು ತಬ್ಬಿಕೊಂಡು ದುರ್ವಿಚಾರದ ದೈವಗೇಡಿಗಳನ್ನು ಉದ್ಧರಿಸಿದವರಿಲ್ಲ, ಸುವಿಚಾರದ ದೈವಶಾಲಿಗಳನ್ನು ಕೆಡಿಸಿದವರಿಲ್ಲ, ಎಂದು ನುಡಿದು ತಮ್ಮ ನಿತ್ಯಕರ್ಮಗಳನ್ನು ಆರಂಭಿಸಿದರು.

**ಸಾ॥ ಸುವಿಚಾರ ಸತ್ಕರ್ಮನಿರತರಿಗೆ ಕೇಡುಂಟೆ।**
**ಭವಭಯರಹಿತನ ದಯದೆ॥**
**ಅವಿವೇಕ ಮರೆಮೋಸ ವಂಚನೆಗೆ ಜಯವುಂಟೆ।**
**ರವಿಯು ಕತ್ತಲೆಯಂಜಿಸುವುದೆ॥ ೧॥**

——— ———

## ೧೮. ವಿವೇಕಿಗಳ ಮನಸ್ಸು.



ಭೀಷ್ಮಾಚಾರ್ಯರ ಆಶ್ರಯವನ್ನವಲಂಬಿಸಿ ತನ್ನ ಇಷ್ಟ ಸಾಧನೆಯಲ್ಲಿ ತೊಡಗಿದ ದ್ರೋಣಾಚಾರ್ಯರು ಕೊನೆಗೆ ಕೃತಕಾರ್ಯರಾದರು. ಅರ್ಜುನನು ದ್ರುಪದನನ್ನು ಸೆರೆಹಿಡಿದು ಹಿಂಗಟ್ಟುಕಟ್ಟಿ ರಥದ ಮೇಲೆ ಹಾಕಿಕೊಂಡು ಆಚಾರ್ಯರ ಬಳಿಗೆ ತಂದು ತನ್ನ ಗುರುದಕ್ಷಿಣೆಯನ್ನು ಸಮರ್ಪಿಸಿದನು. ದ್ರೋಣಾಚಾರ್ಯರಿಗೆ ಅರ್ಜುನನ ಪರಾಕ್ರಮವನ್ನು ನೋಡಿ ಸಂತೋಷವಾಯಿತು. ತನ್ನ ಉದ್ದಿಷ್ಟ ಸಾಧನೆಯಾದುದರಿಂದ ಆ ಆನಂದವು ದ್ವಿಗುಣಿತವಾಯಿತು.

ತನ್ನ ಪದತಲದಲ್ಲಿ ಬಿದ್ದಿರುವ ದುರಹಂಕಾರಿಯಾದ ದ್ರುಪದನನ್ನು ನೋಡಿ ದ್ರೋಣಾಚಾರ್ಯರು—" ಬಾಲ್ಯಸ್ನೇಹಿತನೇ, ಅಷ್ಟೈಶ್ವರ್ಯಗಳಿಂದ ಉನ್ಮತ್ತನಾಗಿ ಅಂಧನಾಗಿದ್ದ ನಿನಗೆ ಈ ದ್ರೋಣನ ಗುರುತು ಹತ್ತಿರಲಿಲ್ಲ. ಅರ್ಧರಾಜ್ಯವನ್ನು ಕೊಡುವೆನೆಂಬ ಬಾಲ್ಯದ ವಚನವು ಸ್ಮರಣೆಗೆ ಬರಲಿಲ್ಲ. ಬ್ರಾಹ್ಮಣನಾದ ನಾನು ನಿನ್ನ ಆ ಅರ್ಧ ರಾಜ್ಯವನ್ನು ತಕ್ಕೊಂಡು ಏನು ಮಾಡುತ್ತಿದ್ದೆನು? ನನ್ನ ಜೀವನಕ್ಕೆ ಸಾಕಷ್ಟು ವೃತ್ತಿಯನ್ನಿಟ್ಟುಕೊಂಡು ನಿನ್ನ ರಾಜ್ಯವನ್ನು ನಿನಗೇ ಕೊಟ್ಟು ಬಿಡುತ್ತಿದ್ದೆನು. ನಮ್ಮ ನಿಮ್ಮ ಸ್ನೇಹವು ಉಳಿಯುತ್ತಿತ್ತು. ನಿನಗೆ ವಚನಪಾಲನದ ಶ್ರೇಯಸ್ಸು ದೊರೆಯುತ್ತಿತ್ತು; ಅಂತಹ ವಿಪತ್ತು ಬಂದಾಗ ನಾನು ನಿನ್ನನ್ನು ಉದ್ಧರಿಸುತ್ತಿದ್ದೆನು. ಇವನ್ನೆಲ್ಲಾ ಯೋಚಿಸದೆ ಬಡ ಹಾರುವನ ಮಗನಿಗೂ ರಾಜಕುಮಾರನಾದ ನನಗೂ ಎಲ್ಲಿಯ ಗೆಳೆತನ? ಎಲ್ಲಿಯ ಅರ್ಧ ರಾಜ್ಯ? ಎಲ್ಲಿಯ ವಚನ? ಎಂದು ರಾಜಸಭೆಯಲ್ಲಿ ತಿರಸ್ಕರಿಸಿ ನುಡಿದ ಆ ನಿನ್ನ ಗರ್ವದ ವಚನಗಳನ್ನು ಈಗ ಇನ್ನೊಮ್ಮೆ ಆಡಿಬಿಡು ನೋಡೋಣ " ಎಂದರು.

ದ್ರುಪದರಾಜನು ಜೀವದಿಂದಿದ್ದರೂ ಸತ್ತವನೇಸರಿ. ಮುಖವೆತ್ತಿ ದ್ರೋಣಾಚಾರ್ಯರನ್ನು ನೋಡಲಾರದೆ ಬಿದ್ದುಕೊಂಡಿದ್ದನು. ಆಗ ಆಚಾರ್ಯರು ದ್ರುಪದರಾಜನ ತಲೆಯ ಮೇಲೆ ಎಡಗಾಲನ್ನಿಟ್ಟು ತಮ್ಮ ಪ್ರತಿಜ್ಞೆಯನ್ನು ಪೂರ್ಣಮಾಡಿ—" ಅರಸನೇ, ಅಹಂಕಾರವು ಯಾರಿಗೂ ತಕ್ಕುದಲ್ಲ. ಯಾವ ಕಾಲಕ್ಕೂ ಒಳ್ಳೆಯದಲ್ಲ. ಈಗ ನಿನ್ನ ರಾಜ್ಯವೂ ನಿನ್ನ ಜೀವನವೂ ನನ್ನ ಕೈಯಲ್ಲಿವೆ. ಹೀಗಿದ್ದರೂ ನಾನು ನಿನ್ನಂತೆ ಅವಿವೇಕವನ್ನು ತೋರಿಸಲಾರೆನು. ನೀನು ಮೊದಲಿನಂತೆ ಪ್ರಮತ್ತನಾಗಕೂಡದೆಂದೂ ನನ್ನ ಪ್ರತಿಜ್ಞೆಯನ್ನು ಪೂರ್ಣಮಾಡಿಕೊಳ್ಳುವದಕ್ಕಾಗಿಯೂ ನಿನ್ನ ಅರ್ಧ ರಾಜ್ಯವನ್ನು ಮಾತ್ರ ನಾನು ಬಿಡಲಾರೆನು. ಮಿಕ್ಕುಳಿದ ಅರ್ಧ ರಾಜ್ಯವನ್ನು ತಕ್ಕೊಂಡು ಇನ್ನಾದರೂ ವಿವೇಕಶಾಲಿಯಾಗಿ ಬಾಳು " ಎಂದು ನುಡಿದ ಅವನ ಬಂಧನವನ್ನು ಬಿಡಿಸಿದರು.

ದ್ರುಪದರಾಜನ ಅಹಂಕಾರದಿಂದ ಮಲಿನವಾದ ಕಣ್ಣುಗಳಿಗೆ ಅಂಜನ ಹಾಕಿದಂತಾಗಲು ಅವನು ಆಚಾರ್ಯರನ್ನು ವಂದಿಸಿ ತನ್ನ ಅವಿವೇಕವನ್ನು ಒಪ್ಪಿಕೊಂಡನು.

ಆಚಾರ್ಯರೂ ಅವರ ಶಿಷ್ಯರೂ ದ್ರುಪದನನ್ನು ಸ್ನೇಹದಿಂದ ನೋಡಿ ಕಳುಹಿಸಿ ಕೊಟ್ಟರು.

ದ್ರುಪದರಾಜನು ತಿರುಗಿ ಬಂದು ತನ್ನ ಅರ್ಧ ರಾಜ್ಯವನ್ನು ಆಳಿಕೊಂಡು ಸುಖ ದಿಂದ ಇರತೊಡಗಿದನು. ಆದರೆ ಅವನ ಅಂತರಂಗದೊಳಗಿನ ಕುಸಸು ಮಾತ್ರ ಅಡಗ ಲಿಲ್ಲ. ಅವನು ಒಂದು ಮಹಾಯಜ್ಞವನ್ನು ಹಮ್ಮಿದನು. ಯಜ್ಞದಲ್ಲಿ ಅವನು ಇಷ್ಟ ದೇವತೆಯಿಂದ ಎರಡು ವರಗಳನ್ನು ಪಡೆದನು. ಅಪ್ರತಿಮವೀರನಾದ ಅರ್ಜುನನ್ನು ತನ್ನವನನ್ನಾಗಿ ಮಾಡಿಕೊಳ್ಳುವದೂ ದ್ರೋಣಾಚಾರ್ಯರ ಸೇಡು ತೀರಿಸಿಕೊಳ್ಳುವದೂ ಅವನ ಎರಡು ಉದ್ದೇಶಗಳಾಗಿದ್ದವು. ಅವನು ತನಗೆ ಅರ್ಜುನನಿಗೆ ಸಲ್ಲುವಂಥ ಒಂದು ಮಗಳನ್ನೂ ದ್ರೋಣಾಚಾರ್ಯರನ್ನು ಕೊಲ್ಲಲುಸಮರ್ಥನಾದ ಒಬ್ಬ ಮಗನನ್ನೂ ಕೊಡೆಂದು ತನ್ನ ಇಷ್ಟದೇವತೆಯನ್ನು ಬೇಡಿಕೊಂಡನು. ಆದರಂತೆ ಕೆಲವು ದಿನ ಗಳಲ್ಲಿಯೇ ಅವನಿಗೆ ಇಬ್ಬರು ಮಕ್ಕಳಾದರು. ಮಗಳಿಗೆ ಕೃಷ್ಣೆಯೆಂದೂ ಮಗನಿಗೆ ಧೃಷ್ಟದ್ಯುಮ್ನನೆಂದೂ ಹೆಸರಿಟ್ಟರು. ಈ ರೀತಿ ದ್ರುಪದನು ತನ್ನ ಇಷ್ಟಸಾಧನೆಯಾಯಿ ತೆಂದು ಆನಂದದಿಂದ ಇರುತ್ತಿದ್ದನು.

ಇತ್ತ ದ್ರೋಣಾಚಾರ್ಯರು ಯಜ್ಞಸಂಭೂತನಾದ ತನ್ನ ವೈರಿಯು ದ್ರುಪದ ರಾಜನ ಮನೆಯಲ್ಲಿ ಬೆಳೆಯುತ್ತಿರುವುದನ್ನು ಕೇಳಿದರೂ ಮನಸ್ಸಿನಲ್ಲಿ ಮತ್ಸರವನ್ನು ತಾಳ ಲಿಲ್ಲ. ದ್ವೇಷಾಸೂಯೆಗಳನ್ನು ಹೊಂದಲಿಲ್ಲ. ನಡುವೆ ದ್ರುಪದನ ಅವಿವೇಕಕ್ಕಾಗಿ ಸಂಭ ವಿಸಿದ ಕಾರ್ಯವನ್ನು ಅವರು ಮರೆತುಬಿಟ್ಟರು. ದ್ರುಪದನಿಗೂ ತನಗೂ ಇರುವ ಬಾಲ್ಯ ಸ್ನೇಹವನ್ನು ಸ್ಮರಿಸಿ ಧೃಷ್ಟದ್ಯುಮ್ನನನ್ನು ಕರೆಯಿಸಿಕೊಂಡು ಅವನಿಗೆ ಸಕಲ ಶಸ್ತ್ರಾಸ್ತ್ರ ವಿದ್ಯೆಗಳನ್ನು ಕಲಿಸಿದರು. ಧೃಷ್ಟದ್ಯುಮ್ನನು ತನ್ನ ವೈರಿಯೆಂಬದೂ ಅವನು ತನ್ನನ್ನು ಕೊಲ್ಲುವದಕ್ಕಾಗಿಯೇ ಹುಟ್ಟಿರುವನೆಂಬದೂ ಒಂದು ದಿನವೂ ಕೂಡ ಆಚಾರ್ಯರ ಮನಸ್ಸಿನಲ್ಲಿ ಬರಲಿಲ್ಲ. ಮಿಕ್ಕ ಶಿಷ್ಯರಂತೆಯೇ ಅವಿಚಲವಾದ ಅಂತಃಕರಣದಿಂದ ಅವ ನಿಗೂ ವಿದ್ಯಾಭ್ಯಾಸ ಮಾಡಿಸಿದರು.

ಇದೀಗ ವಿವೇಕಿಗಳ ಮನಸ್ಸಿನ ಸ್ಥಿತಿ. ಅವಿವೇಕಿಗಳನ್ನು ಹಾದಿಗೆ ತರುವ ದಕ್ಕಾಗಿ ಅವರು ಕೆಲವೊಂದು ಕೃತ್ಯವನ್ನು ಮಾಡಲೇಬೇಕಾಗುವದರಿಂದ ಮಾಡಿದರೂ ಅದನ್ನು ಅವರು ಕೊನೆಯುವರೆಗೆ ಮನಸ್ಸಿನಲ್ಲಿಟ್ಟುಕೊಳ್ಳರು. 'ಇವನು ತನಗೆ ವೈರಿ, ಇವನು ಹಿತಚಿಂತಕನು' ಎಂಬ ಭೇದಬುದ್ಧಿಯು ಅವರಲ್ಲಿ ಉದಯಿಸದು.

**ಸಾಂ|| ವೈರಿಗಳಿರುವರ ಜಯಿಸಿದ ಮಹಿಮರಿಗೆ ।**
**ವೈರಿಗಳಿರುವರೆ ಜಗದೆ ॥**
**ವೈರವನೆ ಸಾಧಿಸಲು ಜನಸಿದಗೆ ದ್ರೋಣನು ।**
**ತೋರಿದನೆ ವೈರಮತ್ಸರವ ॥ ೧ ॥**

## ೧೯. ಮೀನು ಮಾರುವ ಬೆಸ್ತರವಳು.

ದರಿದ್ರಿಯಾದ ಅಂಬಿಗಿತ್ತಿಯೊಬ್ಬಳು ನೆರೆಯೂರಿಗೆ ಸಂತೆಗೆ ಹೋಗಿದ್ದಳು. ಹೋಗುವಾಗ ಬುಟ್ಟಿತುಂಬ ಮೀನವನ್ನು ಒಯ್ದು ಅದನ್ನು ಸಂತೆಯಲ್ಲಿ ಮಾರಿಕೊಂಡು ಬಂದ ಹಣಕಾಸುಗಳಿಂದ ತುಸು ಅಕ್ಕಿ, ತುಸು ಬೇಳೆ, ಮತ್ತೆ ಕೆಲಕೆಲವು ಕಾಳುಕಡಿಗಳು ಮುಂತಾದ ಮುಂದಿನವಾರದ ಜೀವನ ಸಾಮಗ್ರಿಗಳನ್ನೆಲ್ಲ ಕೊಂಡುಕೊಂಡು ಬುಟ್ಟಿಯಲ್ಲಿಟ್ಟು ತಮ್ಮೂರಿಗೆ ಮರಳಿ ಹೊರಟಳು. ನಡುದಾರಿಯಲ್ಲಿಯೇ ಕತ್ತಲೆಯಾದುದರಿಂದ ಒಬ್ಬಳೇ ಮುಂದೆ ಸಾಗಲಾರದೆ ದಾರಿಯ ಅಂಚಿನಲ್ಲಿರುವ ಒಂದು ಉಪವನವನ್ನು ಸೇರಿದಳು. ತೋಟದ ಕಾವಲುಗಾರರು ಅವಳ ಅಡಚಣೆಯನ್ನು ಕೇಳಿಕೊಂಡು ತಮ್ಮ ಗುಡಿಸಲದಲ್ಲಿ ಮಲಗಿಕೊಂಡು ಬೆಳಗುಮುಂಜಾನೆ ಎದ್ದು ಮುಂದೆ ಸಾಗಬಹುದೆಂದು ಹೇಳಿದರು. ಬೆಸ್ತರವಳು 'ಅಣ್ಣಾ, ಉಪಕಾರವಾಯಿತು.' ಎಂದು ತನ್ನ ಮೀನದ ಬುಟ್ಟಿ ಅರಿವೆಗಳನ್ನು ಹೊರಗೊಂದು ಗಿಡದ ಟೊಂಗೆಗೆ ತೂಗಿಬಿಟ್ಟು ಒಳಗೆ ಹೋದಳು. ತೋಟದವನ ಯಜಮಾನತಿಯು ಅವಳಿಗೆ ಆ ರಾತ್ರೆ ಊಟಮಾಡಿಸಿ ಮನೆಯೊಳಗಿನದೊಂದು ಕಂಬಳಿಯನ್ನು ಕೊಟ್ಟು ಮಲಗಿಸಿದಳು.

ತೋಟದ ಕಾವಲುಗಾರನ ಮನೆಯ ಹಿಂಗಡೆಯಲ್ಲಿ ಒಂದು ನಾಗಸಂಪಿಗೆಯ ಗಿಡವೂ ಎಡಗಡೆಗೆ ಎರಡು ಕೆಂಡಸಂಪಿಗೆಯ ಗಿಡಗಳೂ ಇದ್ದವು. ಬಳಿಯಲ್ಲಿಯೇ ಒಂದು ರಾತ್ರಿಮಲ್ಲಿಗೆಯ ಗಿಡವೂ ಇತ್ತು. ವಸಂತಮಾಸವಾಗಿದ್ದುದರಿಂದ ಆ ಗಿಡಗಳ ತುಂಬಾ ಹೂವಾಗಿ ತೋಟವನ್ನೆಲ್ಲ ಸುವಾಸನೆಯಿಂದ ಗಮಗಮಿಸಿ ತುಂಬಿಬಿಟ್ಟಿದ್ದವು. ತೋಟದವನ ಗುಡಿಸಲಿಕ್ಕೆ ಗೋಡೆಯಿಲ್ಲ, ಬಾಗಿಲುಗಳಿಲ್ಲ. ಆದುದರಿಂದ ಒಳಗೆ ಮಲಗಿದವರಿಗೆ ಆ ಹೂವುಗಳ ಸುವಾಸನೆಯು ತುಂಬಾ ಆನಂದವನ್ನು ಕೊಡುತ್ತಿದ್ದಿತು. ಮನೆಯವರು ದಿನಾಲು ಆನಂದದಿಂದ ಆ ಗಿಡಗಳನ್ನು ಬಣ್ಣಿಸಿ ಆ ಸುವಾಸನೆಯಿಂದ ಆನಂದಿತರಾಗಿ ಮಲಗಿಕೊಳ್ಳುವರು. ಆದರೆ ಇಂದು ಆ ಗುಡಿಸಲಕ್ಕೆ ಬಂದಿರುವ ಬೆಸ್ತರವಳಿಗೆ ಆ ಹೂವುಗಳ ಸುವಾಸನೆಯು ಸಹನವಾಗಲಿಲ್ಲ. ಮಧ್ಯರಾತ್ರಿಯು ಮೀರಿದರೂ ಅವಳಿಗೆ ನಿದ್ದೆಯೇ ಬರಲಿಲ್ಲ. ಆಗ ಅವಳು ಎದ್ದುಹೋಗಿ ತನ್ನ ಬುಟ್ಟಿಯೊಳಗಿನ ಮೀನದ ಅರಿವೆಯನ್ನು ತಂದು ಮುಖಕ್ಕೆ ಮುಚ್ಚಿಕೊಂಡು ಅದರ ವಾಸನೆಯಲ್ಲಿ ಹೂವುಗಳ ಸುಗಂಧವನ್ನು ಅಡಗಿಸಿಕೊಂಡು ಸುಖವಾಗಿ ನಿದ್ದೆಹೋದಳು!

ಮೆಚ್ಚಿದವರಿಗೆ ಮಸಣವೇ ಸುಖವೆಂಬದು ಸುಳ್ಳಲ್ಲ. ಮತ್ತು ದುರ್ಗುಣಿಗಳಾದವರಿಗೆ ತಮ್ಮಂತೆ ದುರ್ಗುಣಿಗಳ ಸಹವಾಸವೇ ಸೇರುವದಲ್ಲದೆ ಸುಗುಣಿಗಳ ಸತ್ಸಹವಾಸವು ಎಷ್ಟುಮಾತ್ರವೂ ಒಗ್ಗದು.

**ಸಾಂ॥ ಸುಗುಣ ದುರ್ಗುಣಗಳು ಸಂಸರ್ಗ ಮೂಲದೊ।**
**ಳೊಗೆದು ನೆಲೆಗೊಂಡು ಬೆಳೆಯುವವು॥**
**ಮಗಮಗಿಪ ಕುಸುಮಗಂಧವು ಬೆಸ್ತರವಳಿಗೆ।**
**ಸೊಗಸುವುದೆ ಮೀಸವನ್ನುಳಿದು॥ ೧॥**

## ೨೦. ಜಾತಿಭೇದದ ತೊಡಕು.



ಒಮ್ಮೆ ಶ್ರೀರಾಮಕೃಷ್ಣ ಪರಮಹಂಸರು ತಮ್ಮ ಶಿಷ್ಯರಿಗೆ ಭಗವಂತನು ಸರ್ವ ಪ್ರಾಣಿಗಳಲ್ಲಿಯೂ ವಾಸವಾಗಿರುವನೆಂದೂ ಬ್ರಾಹ್ಮಣರೂ ಶೂದ್ರರೂ ಅತಿ ಶೂದ್ರರೂ ಎಲ್ಲರೂ ಆತನ ಅಂಶಗಳೇ ಆಗಿರುವದರಿಂದ ಒಬ್ಬರು ಇನ್ನೊಬ್ಬರನ್ನು ಹೇಯವಾಗೆಣಿಸುವದು ಅನ್ಯಾಯವೆಂದೂ ಉಪದೇಶಿಸಿದರು.

ಆಗ ಶಿಷ್ಯನೊಬ್ಬನು:—'ಸ್ವಾಮೀ, ಭಗವಂತನು ಸರ್ವರಲ್ಲಿಯೂ ವಾಸವಾಗಿರುವನೆಂದ ಮೇಲೆ ನಾವು ಎಲ್ಲ ಜಾತಿಕುಲಗಳ ಜನರಿಂದ ಆಹಾರವನ್ನು ಸ್ವೀಕರಿಸಲು ಪ್ರತಿಬಂಧವೇನು?' ಎಂದು ಪ್ರಶ್ನೆಮಾಡಿದನು.

ಸ್ವಾಮಿ:—ನೀನು ಬ್ರಾಹ್ಮಣನೇನು? ಶಿಷ್ಯ:—ಹೌದು.

ಸ್ವಾಮಿ:—ಆದುದರಿಂದಲೇ ನೀನು ಹೀಗೆ ಪ್ರಶ್ನೆಮಾಡಿದೆ. ಇರಲಿ. ಒಂದು ದೀಪದ ಕಡ್ಡಿಯನ್ನು ಕೆರೆದು ಅದರ ಮೇಲೆ ಒಂದು ಹೊರೆ ಕಟ್ಟಿಗೆಯನ್ನು ಇಟ್ಟರೆ ಏನಾಗುವದು?

ಶಿಷ್ಯ:—ಮೇಲಿನ ಕಟ್ಟಿಗೆಯ ಭಾರದಿಂದ ಉರಿಯು ಆರಿಹೋಗುವದು.

ಸ್ವಾಮಿ:—ಅಡವಿಗೆ ಬೆಂಕಿ ಹತ್ತಿರುವದನ್ನು ನೀನು ಎಂದಾದರೂ ನೋಡಿರುವಿಯಾ? ಆಗ ಏನೇನು ಸುಡುತ್ತಿರುವವು?

ಶಿಷ್ಯ:—ಹೌದು. ದೊಡ್ಡ ದೊಡ್ಡ ಹಸಿ ಮರಗಳೂ ಉರಿದು ಹೋಗುತ್ತಿವೆ.

ಸ್ವಾಮಿ:—ತಮ್ಮಾ, ಇದೇ ಮಾತು ಮನುಷ್ಯನ ಧಾರ್ಮಿಕ ಆಚಾರಗಳಿಗೂ ಸರಿಹೊಂದುವದು. ಮನುಷ್ಯನ ಆತ್ಮಬಲವು ಸಂಪೂರ್ಣವಾಗಿ ವಿಕಾಸವಾಗುವದಕ್ಕಿಂತ ಮೊದಲೇ ತನ್ನ ತನ್ನ ಕುಲಗೋತ್ರಗಳಿಗೆ ಉಕ್ತವಾಗಿರುವ ಆಚಾರಗಳನ್ನು ತೊರೆದು ನಡೆಯತೊಡಗಿದರೆ ಕಡ್ಡಿಯನ್ನು ಕೊರೆದ ಬೆಂಕಿಯ ಮೇಲೆ ಕಟ್ಟಿಗೆಯ ಹೊರೆಯನ್ನು ಎಸೆದಂತಾಗಿ ಆತ್ಮಬಲವು ಕುಂದಿಹೋಗಬಹುದು. ಆದರೆ ಆ ಆತ್ಮಬಲವು ವಿಕಾಸವಾಗಿ ಆತ್ಮಸಾಕ್ಷಾತ್ಕಾರವಾದ ಬಳಿಕ ಅವನಿಗೆ ಯಾವ ನಿತ್ಯನೈಮಿತ್ತಿಕ ಆಚಾರಗಳೂ ಬೇಕಾಗುವದಿಲ್ಲ. ಜ್ಞಾನವು ಪರಿಪಕ್ವವಾದ ಬಳಿಕ ಆಚಾರವಿಚಾರಗಳೂ ಜಾತಿಭೇದಗಳೂ ತಾವಾಗಿಯೇ ತೊಲಗಿಹೋಗುವವು. ಅಜ್ಞಾನಿಗಳು ಅವನ್ನು ಉಲ್ಲಂಘಿಸಿ ನಡೆಯುವದು ಸರಿಯೆನಿಸದು.

**ಸಾ೦॥ ಪರಿಪಕ್ವವಾದ ಸುಜ್ಞಾನಿಗೆ ಜಗದೊಳ ।**
**ಗಿರಲಾರದಾಚಾರವೆಂದು ॥**
**ತುರುಕುವರೆ ಕಡುಬ ನೀರಿಳಿಯುಹ ಗಂಟಲೊಳು ।**
**ಹರಿದೊಗೆದಾಚಾರವಿಧಿಯು ॥ ೧ ॥**

## ೨೧. ಇಬ್ಬರು ಅಣ್ಣತಮ್ಮಂದಿರು.



ಒಂದು ದಿನ ಸಂಜೆಯ ಮುಂದೆ ಇಬ್ಬರು ಅಣ್ಣತಮ್ಮಂದಿರು ತಿರುಗಾಡಲಿಕ್ಕೆ ಹೊರಟರು. ಮನೆಯಿಂದ ಹೊರಟು ತುಸು ದೂರ ಹೋಗುವಷ್ಟರಲ್ಲಿ ಒಂದುಕಡೆಯಲ್ಲಿ ರಾಮದೇವರ ಗುಡಿಯೊಳಗೆ ಭಾಗವತ ಪುರಾಣವು ನಡೆದಿತ್ತು. ಅದನ್ನು ನೋಡಿ ಅಣ್ಣನು—"ತಮ್ಮಾ; ಇಲ್ಲಿ ಭಾಗವತಪುರಾಣವು ನಡೆದಿದೆ. ತುಸು ಹೊತ್ತು ಕುಳಿತು ಕೇಳಿಹೋಗೋಣ. ಭಗವಂತನ ಗುಣಕೀರ್ತನದ ಶ್ರವಣದಿಂದ ಮನುಷ್ಯರು ಪುನೀತರಾಗುವರಂತೆ" ಎಂದನು.

ಈ ಮಾತು ನಡೆದಿರಲು ಜಾಹಿರಾತುಗಳನ್ನು ಹಂಚುವ ಹುಡುಗನೊಬ್ಬನು ಅವರ ಬಳಿಗೆ ಬಂದು ಒಂದು ಕಾಗದವನ್ನು ಕೊಟ್ಟು ಮುಂದೆ ನಡೆದನು. ಅದರೊಳಗೆ ಊರೊಳಗಿನ ನಾಟಕಗೃಹದೊಳಗೆ ಹೊಸದಾಗಿ ಬಂದಿರುವ 'ಸಿನೆಮಾ' ಕಂಪನಿಯ ನೂತನ ಚಿತ್ರಗಳ ಸರಸವಾದ ವರ್ಣನೆಯಿದ್ದಿತು.

ತಮ್ಮನು ಆ ಜಾಹಿರಾತನ್ನು ಓದಿ—"ಅಣ್ಣಾ, ಭಾಗವತ ಪುರಾಣಶ್ರವಣದಿಂದ ಆಗಬೇಕಾದುದೇನು? ಇಲ್ಲಿ ನೋಡು. ಈ ಊರಿಗೆ ಇಂದೇ ಬಂದಿರುವ ಸಿನೇಮಾ ಕಂಪನಿಯವರು ಬಹು ಸುಂದರವಾದ ಚಿತ್ರಗಳನ್ನು ತೋರಿಸುವರಂತೆ. ಅಲ್ಲಿ ಹೋಗಿ ತಾಸೆರಡುತಾಸು ಕುಳಿತು ಆನಂದಪಟ್ಟು ಮನೆಗೆ ಹೋಗೋಣ" ಎಂದನು.

ಅಣ್ಣನು ಈ ಮಾತಿಗೆ ಸಮ್ಮತಿಸಲಿಲ್ಲ. ಕ್ಷಣಹೊತ್ತು ಅಣ್ಣತಮ್ಮಂದಿರೊಳಗೆ ವಾದವಿವಾದವಾಗಿ ಒಬ್ಬನ ಹೇಳಿಕೆಯನ್ನು ಇನ್ನೊಬ್ಬನು ಸಮ್ಮತಿಸದೆ ಅಣ್ಣನು ಭಾಗವತಪುರಾಣ ಕೇಳಲಿಕ್ಕೂ ತಮ್ಮನು ಸಿನೇಮಾ ಥಿಯೇಟರಕ್ಕೂ ನಡೆದರು.

ತಮ್ಮನು ಸಿನೇಮಾ ಥಿಯೇಟರಕ್ಕೆ ಹೋಗಿ ನಾಲ್ಕಾಣೆ ಕೊಟ್ಟು ಟಿಕೇಟು ತಕ್ಕೊಂಡು ಒಳಗೆ ಹೋಗಿ ಕುಳಿತನು. ತುಸು ಹೊತ್ತಿನಲ್ಲಿಯೇ ಆಟಕ್ಕೆ ಆರಂಭವಾಯಿತು. ಒಂದೆರಡು ನೋಟಗಳನ್ನು ನೋಡಿದ ಬಳಿಕ ತಮ್ಮನ ಮನಸ್ಸು ಇತ್ತ ಭಾಗವತ ಪುರಾಣದ ಕಡೆಗೆ ಹೊರಳಿತು. ಭಗವಂತನ ಕಥಾಶ್ರವಣದಿಂದ ಮನುಷ್ಯನು ಪುನೀತನಾಗುವನೆಂಬ ಮಾತು ಮನಸ್ಸಿಗೆ ಹೊಳೆಯಲು ಅವನಿಗೆ ತಾನು ಅಲ್ಲಿಗೆ ಹೋಗದೆ ಥಿಯೇಟರಕ್ಕೆ ಬಂದುದಕ್ಕಾಗಿ ಪಶ್ಚಾತ್ತಾಪವಾಯಿತು. ಅವನು ಅಲ್ಲಿಯೇ ಕುಳಿತು ತನ್ನ ತಪ್ಪಿಗಾಗಿ ಪಶ್ಚಾತ್ತಾಪಪಟ್ಟು "ಹೇ! ಭಗವಂತನೇ, ನನ್ನ ಅಪರಾಧವನ್ನು ಕ್ಷಮಿಸು! ಅನಾಯಾಸವಾಗಿ ಒದಗಿದ ಪುಣ್ಯಪ್ರಸಂಗವನ್ನು ಕಳೆದುಕೊಂಡು ಅಣ್ಣನು ಹೇಳಿದ ಮಾತನ್ನೂ ಕೇಳದೆ ವಿಲಾಸಕ್ಕೆ ಮನಸೋತು ಇಲ್ಲಿಗೆ ಬಂದುದು ನನ್ನ ಸರ್ವಾಪರಾಧವಾಯಿತು." ಎಂದು ಮುಂತಾಗಿ ಪ್ರಾರ್ಥಿಸಿದನು.

ಅತ್ತ ಅಣ್ಣನು ಗುಡಿಯೊಳಗೆ ಹೋಗಿ ಪುರಾಣ ಶ್ರವಣಕ್ಕೆ ಕುಳಿತನು. ತಮ್ಮನು ಕೊಟ್ಟ ಸಿನೇಮಾದ ಜಾಹಿರಾತು ಅವನ ಕೈಯೊಳಗೇ ಇದ್ದಿತು. ಆಚಾರ್ಯರು ಹೇಳುತ್ತಿದ್ದ ಭಾಗವತಪುರಾಣವು ಅವನ ಒಂದು ಕಿವಿಯೊಳಗಿಂದ ಒಳಸೇರಿ ಮತ್ತೊಂದು ಕಿವಿಯಿಂದ ಹೊರಟುಹೋಗುವ ಕಾರ್ಯವು ನಡೆಯತೊಡಗಿತು. ಅವನ ಲಕ್ಷ್ಯವೆಲ್ಲ ಕೈಯೊಳಗಿನ ಸಿನೇಮಾದ ಜಾಹಿರಾತಿನ ಕಡೆಗೇ ಇದ್ದಿತು. ತಮ್ಮನು ಥಿಯೇಟರಕ್ಕೆ ಹೋಗಿ ಎಲ್ಲಿ ಕುಳಿತಿದ್ದಾನು? ಆಟವು ಈಗ ಯಾವ ಮೆಟ್ಟಿಗೆ ಬಂದಿದ್ದೀತು? ಎಂಥ ಚಿತ್ರಗಳು ಹೇಗೆ ಹೇಗೆ ಚಲಿಸುತ್ತಿರಬಹುದು? ಇವೇ ಮುಂತಾದ ವಿಚಾರಗಳಲ್ಲಿ ತನ್ಮಯನಾಗಿ ತಾನು 'ಸಿನೇಮಾ' ನೋಡಲಿಕ್ಕೆ ಹೋಗದೆ ಇಲ್ಲಿ ಪುರಾಣ ಕೇಳಲಿಕ್ಕೆ ಬಂದುದು ತಪ್ಪಾಯಿತೆಂದು ನೊಂದುಕೊಂಡನು.

ರಾತ್ರಿ ೯ ಗಂಟೆಗೆ ಇಬ್ಬರೂ ಮನೆಗೆ ಬಂದು ಊಟಮಾಡಿ ಮಲಗಿಕೊಂಡರು. ಮುಂದೆ ಕೆಲವು ದಿನಗಳಲ್ಲಿಯೇ ಆವುದೋ ಒಂದು ಮಹಾವ್ಯಾಧಿಯಿಂದ ಅವರಿಬ್ಬರೂ ಒಂದೇ ದಿವಸ ಮರಣಹೊಂದಿದರು. ಭಾಗವತಪುರಾಣವನ್ನು ಕೇಳಲಿಕ್ಕೆ ಹೋದ ಅಣ್ಣನನ್ನು ಯಮದೂತರು ಬಂದು ಸೆಳೆದೊಯ್ದರು. ಸಿನೇಮಾ ನೋಡಲಿಕ್ಕೆ ಹೋದ ತಮ್ಮನನ್ನು ವಿಷ್ಣುದೂತರು ವೈಕುಂಠಕ್ಕೆ ಕರೆದೊಯ್ದರು.

ಭಗವಂತನ ರಾಜ್ಯದಲ್ಲಿ ಬಾಹ್ಯಕೃತಿಗಳಿಗೆ ಮಹತ್ವವಿಲ್ಲ. ಅವನ ನ್ಯಾಯವಿಚಾರಣೆಗೆ ಸಾಕ್ಷಿ ಪಟ್ಟಿಗಳ ಅವಶ್ಯಕತೆಯಿಲ್ಲ. ವಕೀಲರೂ ಬ್ಯಾರಿಸ್ಟರರೂ ಬೇಕಾಗುವದಿಲ್ಲ. ಆತನ ನಿಷ್ಪಕ್ಷಪಾತ ನ್ಯಾಯನಿರ್ಣಯದಲ್ಲಿ ಮನಸ್ಸಿನ ವಿಚಾರಗಳಿಗೇ ಮಹತ್ವವಿದೆ. ಕೇವಲ ಪುರಾಣಶ್ರವಣಕ್ಕೆ ಹೋಗಿ ಕುಳಿತ ಮಾತ್ರದಿಂದ ಅವರಿಗೆ ಪುಣ್ಯವು ಲಭಿಸಲಾರದು. ಅದಕ್ಕೆ ತಕ್ಕ ಅಂತರಂಗಶುದ್ಧಿಯು ಬೇಕು.

ಸಾಂ॥ ಹದಿನಾಲ್ಕು ಲೋಕಗಳನಾಳುವಾ ಸರ್ವಜ್ಞ ।
ಸದಯ ಶ್ರೀಹರಿಗಗೋಚರವೆ ॥
ಇದು ಧರ್ಮವಿದಧರ್ಮವೆಂಬುದು ಮೂಢನೆ ।
ಸದಮಲ ಚಿತ್ತವನೆ ಪಡೆಯೈ ॥ ೧ ॥

## ೨೨. ಶ್ರೀರಾಮಚಂದ್ರನ ವೈರಾಗ್ಯ.



ವಶಿಷ್ಠ ಮಹರ್ಷಿಗಳ ಬಳಿಯಲ್ಲಿ ತತ್ವೋಪದೇಶಹೊಂದಿದ ಶ್ರೀರಾಮಚಂದ್ರನು ಅಸಾರವಾದ ಸಂಸಾರದಲ್ಲಿ ತೊಳಲಾಡಲು ಸಮ್ಮತಿಸದೆ ಸರ್ವಸಂಗ ಪರಿತ್ಯಾಗಮಾಡಬೇಕೆಂದು ನಿಶ್ಚಯಿಸಿದನು.

ದಶರಥ ಮಹಾರಾಜನಿಗೂ ಮಂತ್ರಿ ಪರಿಜನರಿಗೂ ರಾಮಚಂದ್ರನ ಈ ವಿಚಾರವು ತಿಳಿಯಲು ಅವರೆಲ್ಲರೂ ಬಹು ಚಿಂತಾಕ್ರಾಂತರಾದರು. ಅವರು ರಾಮಚಂದ್ರನ ಮನಸ್ಸನ್ನು ತಿರುಗಿಸಲು ಹಲವು ವಿಧದಿಂದ ಯತ್ನಿಸಿದರು. ಆದರೂ ಸ್ಥಿರಚಿತ್ತನಾದ ರಾಮಚಂದ್ರನ ಮನಸ್ಸಿನೊಳಗಿನ ವೈರಾಗ್ಯ ಭಾವನೆಯು ಕಡಿಮೆಯಾಗಲಿಲ್ಲ. ಕೊನೆಗೆ ದಶರಥ ಮಹಾರಾಜನು ವಶಿಷ್ಠರನ್ನೇ ಕರಿಸಿ ರಾಮಚಂದ್ರನ ಮನಸ್ಸನ್ನು ತಿರುಗಿಸಿ ಸರಿಯಾದ ಮಾರ್ಗಕ್ಕೆ ಹಚ್ಚಬೇಕೆಂದು ಕೇಳಿಕೊಂಡನು.

ವಶಿಷ್ಠರು ತಮ್ಮ ಶಿಷ್ಯನನ್ನು ಕರೆದು ಕೂಡ್ರಿಸಿಕೊಂಡು ಮೊದಲು ಆತನ ವಿಚಾರಗಳನ್ನೆಲ್ಲ ಸಮಾಧಾನದಿಂದ ಕೇಳಿಕೊಂಡರು. ಬಳಿಕ "ರಾಮಚಂದ್ರಾ, ನಿನ್ನ ವಿಚಾರವೆಲ್ಲಾ ತಿಳಿದ ಹಾಗಾಯಿತು. ಭಗವತ್ ಸಾಕ್ಷಾತ್ಕಾರಕ್ಕೆ, ಪ್ರಪಂಚವು ಪ್ರತಿಬಂಧಕವಾಗಿದೆಯೆಂದೂ ಪ್ರಾಪಂಚಿಕ ಕಷ್ಟತಾಪತ್ರಯಗಳು ಸಹನಾತೀತವೆಂದೂ ನಿನ್ನ ವಿಚಾರವಿದ್ದುದು ತಿಳಿಯಿತು. ಆದರೆ ನನ್ನದೊಂದು ಪ್ರಶ್ನೆಗೆ ಸಮರ್ಪಕವಾದ ಉತ್ತರವನ್ನು ಹೇಳಿ ಬಳಿಕ ನೀನು ಸರ್ವಸಂಗಪರಿತ್ಯಾಗವನ್ನಾದರೂ ಮಾಡು; ಸನ್ಯಾಸಿಯಾಗುವದಾದರೂ ಆಗು. ನಿನಗೆ ಯಾವದು ಸರಿಯೆನಿಸುವದೋ ಅದನ್ನೇ ಆನಂದದಿಂದ ಮಾಡಬಹುದು." ಎಂದರು.

ವಶಿಷ್ಠ:—ಭಗವಂತನು ಪ್ರಪಂಚದ ಹೊರಗೆ ಇರುವನೋ ಪ್ರಪಂಚದಲ್ಲಿಯೇ ಇರುವನೋ? ಆತನು ಪ್ರಪಂಚಕ್ಕೆ ವಿರೋಧಿಯಾಗಿ, ಪ್ರಪಂಚದಿಂದ ಭಿನ್ನನಾಗಿದ್ದರೆ ಈ ವಿಶ್ವಸಂಸಾರವನ್ನೆಲ್ಲ ಯಾರು ಸೃಷ್ಟಿಸಿದರು? ಯಾಕೆ ಸೃಷ್ಟಿಸಿದರು?

ರಾಮಚಂದ್ರನು ಗುರುಗಳ ಪ್ರಶ್ನೆಯನ್ನು ಕುರಿತು ವಿಚಾರಮಾಡತೊಡಗಿದನು. ಭಗವಂತನು ಪ್ರಪಂಚದಿಂದ ಭಿನ್ನನಾಗಿ ಪ್ರಪಂಚಕ್ಕೆ ವಿರೋಧಿಯಾಗಿದ್ದರೆ ಈ ಕೋಟ್ಯವಧಿ ಮನುಷ್ಯ ಪಶುಪಕ್ಷಿ ಕ್ರಿಮಿಕೀಟಕ ವನಸ್ಪತಿಗಳೇ ಮೊದಲಾದವುಗಳ ಸೃಷ್ಟಿ ಸ್ಥಿತಿ ಲಯಗಳು ಕ್ಷಣಕ್ಷಣಕ್ಕೆ ಒಂದೊಂದು ವಿಧವಾಗಿ ನಡೆಯಲು ಕಾರಣವೇನಿದೆ? ಆತನು ಈ ಪ್ರಪಂಚದಲ್ಲಿರದೆ ಇದ್ದರೆ ಇನ್ನೆಲ್ಲಿ ಇರಬೇಕು? ಇವೇ ಮುಂತಾದ

ಹಲವು ವಿಚಾರಗಳಿಂದ ಅವನ ಮನಸ್ಸು ಯಾವ ನಿರ್ಣಯಕ್ಕೂ ಮುಟ್ಟದೆ ಚಂಚಲ ವಾಗತೊಡಗಿತು.

ವಶಿಷ್ಠ:—ತಮ್ಮಾ, ರಾಮಚಂದ್ರಾ, ನಾನು ನಿನಗೆ ಉಪದೇಶಿಸಿದ ತತ್ವಜ್ಞಾನದ ರಹಸ್ಯವನ್ನೂ ಪಾರಮಾರ್ಥ ಬೋಧೆಯನ್ನೂ ನೀನು ಸರಿಯಾಗಿ ತಿಳಿದುಕೊಂಡಿಲ್ಲ. ಪ್ರಪಂಚವು ತಾಪತ್ರಯಕಾರಕವಾಗಿ ಮನುಷ್ಯನ ಆಧ್ಯಾತ್ಮಿಕ ಜ್ಞಾನಕ್ಕೆ ಪ್ರತಿಬಂಧಕ ವಾಗಿರುವದು ಒಂದು ರೀತಿಯಿಂದ ನಿಜವಾಗಿದ್ದರೂ ಮತ್ತೊಂದು ದೃಷ್ಟಿಯಿಂದ ಆ ಭಗವಂತನ ಪ್ರೇಮಸಂಪಾದನೆಗೂ ಆತನ ಸಾಕ್ಷಾತ್ಕಾರವಾಗಿ ಆತ್ಮಜ್ಞಾನವನ್ನು ಹೊಂದುವದಕ್ಕೂ ಆ ಪ್ರಪಂಚವೇ ಕಾರಣವಾಗುವದು. ಪ್ರಾಪಂಚಿಕನಾದ ಮನುಷ್ಯನು ಅದರೊಳಗಿನ ಕಷ್ಟ ತಾಪತ್ರಯಗಳಿಂದ ಬೆಂದು ಬೆಂಡಾಗಿ ಭಗವಂತನ ಸಾನ್ನಿಧ್ಯವನ್ನು ಹೊಂದಲು ತಕ್ಕ ಸ್ಥಿತಿಯನ್ನು ತಾನಾಗಿ ಪಡೆಯುವನು. ಪ್ರಪಂಚದಲ್ಲಿ ಕೇವಲ ಕಷ್ಟವೇ ಇರುವದಿಲ್ಲ. ಕಷ್ಟ ಸುಖಗಳು ಅದರಲ್ಲಿ ಸಮ್ಮಿಶ್ರವಾಗಿರುವವು. ಪ್ರಪಂಚದ ಸುಖಸೇವನೆಯಿಂದ ಮನುಷ್ಯನ ಮನಸ್ಸಿಗೆ ಭುಕ್ತಭೋಗಾವಸ್ಥೆಯು ಪ್ರಾಪ್ತವಾಗಿ ಅದರೊಳಗಿನ ಸುಖವು ಎಂಥದು ಅದು ಎಷ್ಟುಮಟ್ಟಿಗೆ ಸುಖಕರವಾಗಿದೆ ಎಂಬದರ ಜ್ಞಾನವಾಗುವದು. ಹೀಗೆ ವಿವೇಕಿಗಳಾದವರಿಗೆ ಪ್ರಾಪಂಚಿಕ ಕಷ್ಟಗಳಿಂದ ವಿರಕ್ತಿಯೂ ಸುಖಾನುಭವಗಳಿಂದ ಭುಕ್ತಭೋಗಾವಸ್ಥೆಯೂ ಪ್ರಾಪ್ತವಾಗಿ ಅವರು ನಿಜವಾದ ವೈರಾಗ್ಯವನ್ನು ಪಡೆಯುವರು. ಈಗ ನಿನಗುಂಟಾಗಿರುವ ವೈರಾಗ್ಯವು ಕೇವಲ ಉಪದೇಶ ಮೂಲಕವಾದುದು. ಇಂತಹ ವೈರಾಗ್ಯಕ್ಕಿಂತಲೂ ಪ್ರಾಪಂಚಿಕ ಅನುಭವಗಳಿಂದ ಉಂಟಾದ ವೈರಾಗ್ಯವು ಉಚ್ಚತರದ್ದೂ ಸ್ಥಿರವಾದುದ್ದೂ ಆಗುವದು. ಭಗವಂತನು ಈ ಪ್ರಪಂಚದಿಂದ ಭಿನ್ನನಾಗಿಲ್ಲ. ಈ ಪ್ರಪಂಚವೆಲ್ಲಾ ಆ ಪರಮಾತ್ಮನ ಲೀಲೆಯೇ ಸರಿ. ಸೃಷ್ಟಿಯೊಳಗಿನ ಸರ್ವವಸ್ತುಗಳಲ್ಲಿಯೂ ಆತನು ಇದ್ದೇ ಇರುವನು.

ಗುರುಗಳ ಉಪದೇಶದಿಂದ ರಾಮಚಂದ್ರನ ವೈರಾಗ್ಯ ಮಾರ್ಗವು ಬದಲಾಯಿತು.

**ಸಾ॥ ಸಂಸಾರ ತಾಪತ್ರಯಂಗಳಿಗಂಜುತ ।**
**ಸಂಸಾರ ತ್ಯಾಗಿಯಾಗುವಗೆ ॥**
**ಸಂಸಾರ ಬಂಧನವು ಬಿಡಲಾರದದರೊಳೆ ।**
**ಕಂಸಾರಿಯನು ಕಾಣಬಹದು ॥ ೧ ॥**

---

## ೨೩. ಭಗವಂತನ ರೂಪಗುಣಗಳು.



ತ್ರಾಳೆಯ ಮರದ ಹೆಡೆಗಳ ಸಂದಿನಲ್ಲಿ ಒಂದು ವಿಚಿತ್ರವಾದ ಕೀಟಕವು ಮನೆ ಮಾಡಿಕೊಂಡಿರುವದು. ಅದರ ಬಣ್ಣವು ಮೇಲಿಂದ ಮೇಲೆ ಬದಲಾಗುತ್ತಿರುವದು. ಕೆಲವು ದಿನ ಕೆಂಪು ಬಣ್ಣದಿಂದಿದ್ದರೆ ಮತ್ತೆ ಕೆಲವು ದಿನ ಹಳದಿಯಾಗುವದು. ಆ ಮೇಲೆ ಕೆಲವು ದಿನಗಳವರೆಗೆ ಹಸುರು ಬಣ್ಣದ್ದಾಗುವದು.

ಒಮ್ಮೆ ಒಬ್ಬ ಹಳ್ಳಿವಾಡದವನು ತಮ್ಮ ತೋಟದ ಅಂಚಿನಲ್ಲಿರುವ ತಾಳೆಯು ಮರದ ಮೇಲೆ ಇರುವ ಆ ವಿಚಿತ್ರ ಕೀಟಕವು ಹಳದಿ ಬಣ್ಣದಲ್ಲಿರುವದನ್ನು ನೋಡಿ ತಮ್ಮ ನೆರೆಮನೆಯುವನ ಸಂಗಡ ಮಾತಾಡುವಾಗ ಆ ಕೀಟಕದ ವಿಷಯಕವಾಗಿ ಮಾತು ತೆಗೆದು ಅದು ಹಳದಿಯ ಬಣ್ಣದ್ದೆಂದು ಹೇಳಿದನು. ಅದನ್ನು ಕೇಳಿ ನೆರೆಮನೆಯುವನು “ ಛೇ ! ಅದರ ಬಣ್ಣವು ಎಂದೂ ಹಳದಿಯಾಗಲಾರದು. ನಾಲ್ಕು ದಿನಗಳ ಹಿಂದೆ ನಾನು ಕಣ್ಣಾರೆ ಕಂಡಿರುವೆನು. ಅದರ ಬಣ್ಣ ಅಚ್ಚ ಕೆಂಪು.” ಎಂದು ಇದಿರು ವಾದಿಸಿದನು. ಮಾತಿಗೆ ಮಾತು ಬೆಳೆದು ದೊಡ್ಡ ಕಲಹವೇ ಹುಟ್ಟಿತು. ಇಬ್ಬರೂ ಕೂಗಾಡುತ್ತ ಆ ತಾಳೆಯ ಮರಕ್ಕೆ ಹೋಗಿ ನೋಡಬೇಕೆಂದು ಹೊರಟರು. ದಾರಿಯಲ್ಲಿ ಇಬ್ಬರಿಗೂ ಪರಿಚಯುದವನಾದ ಒಬ್ಬ ಸದ್ಗೃಹಸ್ಥನು ಕೂಡಿದನು. ಅವನನ್ನು ಕುರಿತು ಮೊದಲನೆಯುವನು:— ಅಣ್ಣಾ, ನಿಮಗೆ ನಮ್ಮ ತೋಟದ ತಾಳೆಯು ಮರದ ಮೇಲಿರುವ ವಿಚಿತ್ರವಾದ ಕೀಟಕದ ಮಾತು ಗೊತ್ತಿದೆಯುಲ್ಲವೇ ? ಅದು ಹಳದಿಯ ಬಣ್ಣದ್ದೆಂದರೆ ಈತನು ನನ್ನೊಡನೆ ಇದಿರು ವಾದಿಸಿ ಅದು ಕೆಂಪು ಬಣ್ಣದ್ದೆಂದು ಹೇಳುತ್ತಿದ್ದಾನೆ. ನೀವೇ ಹೇಳಿರಿ. ಅದು ಹಳದಿಯ ಬಣ್ಣದ್ದಲ್ಲವೇ ?

ಗೃಹಸ್ಥ:—ಹೌದು.

ಎರಡನೆಯುವ:—ಛೇ ! ಸುಳ್ಳು ಮಾತು. ಆ ದಿವಸ ನಾನು ನಿಮಗೆ ಪ್ರತ್ಯಕ್ಷವಾಗಿ ತೋರಿಸಿದ್ದೇನೆ. ಆ ಕೀಟಕವು ಅಚ್ಚ ಕೆಂಪು ಬಣ್ಣದಲ್ಲಿರುವದನ್ನು ನೀವು ನೋಡಿಲ್ಲವೇ ?

ಗೃಹಸ್ಥ:—ಹೌದು.

ವಾದಿ ಪ್ರತಿವಾದಿಗಳಿಬ್ಬರಿಗೂ ಆಶ್ಚರ್ಯವಾಯಿತು. ಗೃಹಸ್ಥನು ಅವರ ಆಶ್ಚರ್ಯಚಕಿತ ಮುಖಲಕ್ಷಣವನ್ನು ನೋಡಿ ನಕ್ಕು ಬಿಟ್ಟನು. ಮತ್ತು:—ನೀವು ನನ್ನ ಮಾತಿನಿಂದ ಆಶ್ಚರ್ಯಪಡುವ ಕಾರಣವಿಲ್ಲ. ನೀವಿಬ್ಬರೂ ಹೇಳಿದ ಮಾತು ನಿಜವೇ ಸರಿ. ನೀವು ಹೇಳುವ ಕೀಟಕವು ಕೆಲವು ದಿವಸ ಕೆಂಪು ಬಣ್ಣದ್ದಿದ್ದು ಬಳಿಕ ಹಳದೀ

ಬಣ್ಣದಾಗುವದು. ಇನ್ನೂ ಕೆಲವು ದಿವಸಗಳ ತರುವಾಯ ನೋಡಿದರೆ ಅದು ಹಸುರು ಬಣ್ಣದ್ದಾಗುವದು. ಆದುದರಿಂದಲೇ ನಾನು ನೀವಿಬ್ಬರೂ ಹೇಳುವ ಮಾತು ನಿಜವೆಂದು ಒಪ್ಪಬೇಕಾಯಿತು." ಎಂದು ಸಮಾಧಾನಪಡಿಸಿದನು.

ಸಚ್ಚಿದಾನಂದ ಸ್ವರೂಪನಾದ ಭಗವಂತನ ವಿಷಯದಲ್ಲಿಯೂ ಜನರೊಳಗೆ ಇದೇ ತರದ ವಾದವಿವಾದಗಳು ಪುನಃ ಪುನಃ ಉಂಟಾಗುತ್ತಿವೆ. ಆತನ ಒಂದು ಸ್ವರೂಪವನ್ನು ನೋಡಿದವನು ಇನ್ನೊಂದು ಸ್ವರೂಪವನ್ನು ನಂಬಿದವನ ಸಂಗಡ ವಿರುದ್ಧ ವಾದಿಸಿ ವಿರೋಧ ಬೆಳಿಸುವದು ಎಷ್ಟುಮಾತ್ರವೂ ಸರಿಯಲ್ಲ. ತಾಳೆಯ ಮರದ ಮೇಲಿನ ವಿಚಿತ್ರ ಕೀಟಕವು ತನ್ನ ಬಣ್ಣವನ್ನು ಆಗಾಗ ಬದಲುಮಾಡುತ್ತಿರುವಂತೆ ಭಗವಂತನು ಬಹುರೂಪಿಯಾಗಿರುವನು. ಅವನು ಇಂಥದೇ ರೂಪದಲ್ಲಿ ಇಂಥದೇ ಸ್ಥಳದಲ್ಲಿ ಇರುವನೆಂದು ಹೇಳುವದು ಸಾಧ್ಯವಾದ ಮಾತಲ್ಲ. ಆದುದರಿಂದ ಭಗವಂತನ ರೂಪಗುಣಗಳ ವಿಷಯವಾಗಿ ಒಬ್ಬನು ಇನ್ನೊಬ್ಬನ ಸಂಗಡ ವಾದಿಸುವದರಲ್ಲಿ ಏನೂ ತಥ್ಯವಿಲ್ಲ. ಆತನು ಸರ್ವತೋಮುಖನು. ಸರ್ವಶಕ್ತನು. ಆತನು ಸಾಕಾರನೂ ಅಹುದು. ನಿರಾಕಾರನೂ ಅಹುದು. ನೀರಿಗೆ ಯಾವ ಆಕಾರವೂ ಇಲ್ಲದಿದ್ದರೂ ಅದು ತುಂಬಿದ ಪಾತ್ರೆಯ ಆಕಾರವುಳ್ಳದ್ದಾಗುವದರಿಂದ ಅದರ ಆಕಾರದ ವಿಷಯವಾಗಿ ಭ್ರಾಂತಿಯುಂಟಾಗಲು ಕಾರಣವಾಗುವಂತೆಯೇ ಭಗವಂತನ ವಿಷಯದಲ್ಲಿಯೂ ಆಗುವದು. ಎಲ್ಲ ಕಡೆಯಲ್ಲಿಯೂ ತುಂಬಿರುವ ನೀರು ಬರ್ಫದ ರೂಪಕ್ಕೆ ಬಂದರೆ ಆಗ ಅದಕ್ಕೆ ವಿಶಿಷ್ಟವಾದ ಆಕಾರವುಂಟಾಗುವದು. ಅದರಂತೆ ಸರ್ವವ್ಯಾಪಿಯೂ ನಿರಾಕಾರನೂ ಆದ ಭಗವಂತನು ತನ್ನ ಶಕ್ತಿಸ್ಫೂರ್ತಿಯಿಂದ ನಮ್ಮ ಇಂದ್ರಿಯಗೋಚರನಾಗುತ್ತಿರುವನು. ಬರ್ಫವು (ನೀರ್ಗಲ್ಲು) ನೀರಿನಿಂದಲೇ ಉಂಟಾಗಿ ನೀರಿನಲ್ಲಿದ್ದುಕೊಂಡು ಪುನಃ ನೀರಿನಲ್ಲಿಯೇ ಲೀನವಾಗಿ ಹೋಗುವ ಹಾಗೆ ಭಗವಂತನು ಸಾಕಾರನಾಗಿ ನಿರಾಕಾರದಲ್ಲಿಯೇ ಇದ್ದು ಪುನಃ ನಿರಾಕಾರದಲ್ಲಿಯೇ ಲೀನನಾಗಬಲ್ಲನು. ಅದರಿಂದ ಅವನು ಸಾಕಾರನೂ ಅಹುದು ನಿರಾಕಾರನೂ ಅಹುದು. ಅವನ ಭಕ್ತರು ನಂಬುವ ಎಲ್ಲ ರೂಪಗುಣಗಳೂ ಆತನಲ್ಲಿ ಇದ್ದೇ ಇರುವವು.

**ಸಾಂ॥ ಬಹುರೂಪ ಬಹುಗುಣಯುತನಾಗಿ ಗುಣರೂಪ |**
**ರಹಿತನೆಂದೆನಿಪನ್ನೆ ಹರಿಯು ||**
**ಅಹಿತವನ್ನೆಣಿಸಿ ವಾದಿಸದಿರು ಗುಣರೂಪ |**
**ಕಹಿತನ ಭಕ್ತವರ್ಗದೊಳು || ೧ ||**

---

## ೨೪. ಅನುಕರಣ.



ಒಂದು ಊರಲ್ಲಿ ಒಬ್ಬ ಸಾವುಕಾರನಿದ್ದನು. ಮೂರು ನಾಲ್ಕು ಊರುಗಳಲ್ಲಿ ಅವನ ಮಳಿಗೆಗಳಿದ್ದವು. ವ್ಯಾಪಾರದಲ್ಲಿಯೂ ಅವನಿಗೆ ಸಾಕಷ್ಟು ಕುಶಲತೆಯಿದ್ದಿತು. ಕೊಡಕೊಳ್ಳುವ ವ್ಯವಹಾರದಲ್ಲಿ ತಕ್ಕಮಟ್ಟಿಗೆ ಒಳ್ಳೆಯವನೆಂದೇ ಪ್ರಚಾರವಿದ್ದುದರಿಂದ ಕೆಲವು ವರುಷಗಳಲ್ಲಿಯೇ ಸಾವುಕಾರನು ಲಕ್ಷಾವಧಿ ರೂಪಾಯಿಗಳನ್ನು ಗಳಿಸಿದನು.

ಮನುಷ್ಯನ ಪರಿಸ್ಥಿತಿಯು ಕೊನೆಯುವರೆಗೂ ಒಂದೇ ಸವನೆ ಇರುತ್ತಿರುವದಿಲ್ಲ. ಸಾವುಕಾರನ ವ್ಯಾಪಾರ-ಸ್ಥಿತಿಯು ಬದಲಾಯಿತು. ಈ ವರುಷ ಹತ್ತು ಸಾವಿರ ಮರು ವರುಷ ಇಪ್ಪತ್ತು ಸಾವಿರ ಹೀಗೆ ಹಾನಿಯಾಗುತ್ತ ಕೊನೆಗೆ ೩೦-೪೦ ಸಾವಿರ ರೂಪಾಯಿಗಳ ಸಾಲವಾಯಿತು. ಜನರಲ್ಲಿ ಶ್ರೀಮಂತನೆನಿಸಿಕೊಂಡು ಮಾನಮರ್ಯಾದೆಗಳನ್ನು ಹೊಂದುತ್ತಿದ್ದ ಸಾವುಕಾರನ ಶ್ರೀಮಂತಿಕೆಯು ಹೋಯಿತು ಇಷ್ಟೇ ಅಲ್ಲ; ತಾನೇ ಸಾಲಗಾರನಾಗಿ ಹಣಕೊಟ್ಟವರಲ್ಲಿ ದಿನಕ್ಕೊಬ್ಬರು ಬಂದು ಕೇಳತೊಡಗಿದರು. ಸಾವುಕಾರನು ಬೇರೆ ಉಪಾಯ ತೋರದೆ ಹುಚ್ಚನ ಸೋಗು ಹಾಕಿ ಬಾಯಿಗೆ ಬಂದಂತೆ ಬಡಿಬಡಿಸತೊಡಗಲು ಸಾಲಕೊಟ್ಟವರೆಲ್ಲರೂ ಗಂಟು ಕಳಕೊಂಡೆವೆಂದು ಚಿಂತಿಸಿದರು.

ಸಾವುಕಾರ ಹಿತಚಿಂತಕರು ಅವನಿಗೆ ಅನೇಕ ವಿಧದ ಔಷಧೋಪಚಾರ ಮಾಡಿಸಿದರು. ಅದರಿಂದ ಅವನ ಹುಚ್ಚು ಕಡಿಮೆಯಾಗಲಿಲ್ಲ.

ಸಾವುಕಾರನ ಹುಚ್ಚನ ಗುಟ್ಟನ್ನರಿತ ಅವನ ಸ್ನೇಹಿತನೊಬ್ಬನು ಒಂದುದಿನ ಅವನ ಬಳಿಗೆ ಬಂದು—“ಅಣ್ಣಾ, ನಿನ್ನ ಹುಚ್ಚಿನ ಲಕ್ಷಣವೇನೋ ಒಳ್ಳೆಯದಾಗಿ ತೋರುವದಿಲ್ಲ. ಇನ್ನೂ ಕೆಲವು ದಿವಸ ನೀನು ಹೀಗೆಯೇ ಹುಚ್ಚನಂತೆ ನಟಿಸಿದರೆ ಕೊನೆಗೆ ನಿಜವಾಗಿಯೂ ಹುಚ್ಚನಾಗಿ ಬಿಡುವಂತೆ ತೋರುವದು. ಈಗಾಗಲೇ ನಿನ್ನಲ್ಲಿ ಹುಚ್ಚರ ಹಲವು ಲಕ್ಷಣಗಳು ಸೇರಿ ಹೋಗಿವೆ” ಎಂದನು.

ಸಾವುಕಾರನು ಅಂಜಿದನು. ಅಂದಿನಿಂದ ಅವನ ಹುಚ್ಚು ದಿನದಿನಕ್ಕೆ ಕಡಿಮೆಯಾಗುತ್ತ ನಡೆಯಿತು.

ಒಳ್ಳೆಯ ಅಥವಾ ಕೆಟ್ಟಗುಣಗಳ ಅನುಕರಣದಿಂದ ಮನುಷ್ಯನಲ್ಲಿ ಆ ಗುಣಗಳು ತಾವಾಗಿ ಸೇರಿ ಬಿಡುವವು.

**ಸಾಂ॥ ಗುಣಿಗಳನನುಕರಿಸೆ ಗುಣವಂತರಾಗುವರು ।**
**ಗುಣಹೀನರನುಕರಣದಿಂದ ॥**
**ಗುಣಹೀನರೆನಿಸುವರದರಿಂದ ಸುಗುಣಿಗಳ ।**
**ನನುಕರಿಸಿ ನಡೆಯುವದು ನಿರುತ ॥ ೧ ॥**

## ೨೫. ಪೂಜಾರಿಯ ಭಕ್ತಿಪರೀಕ್ಷೆ.



ಜಯಪುರದ ರಾಜವಾಡೆಯಲ್ಲಿ ಒಂದು ಶಿವಾಲಯವಿರುವದು. ಅರಸನೂ ಆತನ ಪರಿವಾರದವರೂ ಆ ಶಿವಾಲಯದ ವೆಚ್ಚವನ್ನು ನಡಿಸುವರು. ಆ ಶಿವಾಲಯದಲ್ಲಿ ಒಂದು ವಿಶಿಷ್ಟತರದ ಪರಿಪಾಠವಿದ್ದಿತು. ದೇವರಿಗೆ ಪೂಜೆಯ ಕಾಲದಲ್ಲಿ ಅಲಂಕಾರ ಮಾಡಿದ ಹೂವಿನ ಮಾಲೆಯನ್ನು ಮಾರನೆಯ ದಿನ ಬೆಳಿಗ್ಗೆ ಪೂಜಾರಿಯು ಅರಮನೆಗೆ ಒಯ್ದು ಮುಟ್ಟಿಸಬೇಕು; ಆ ಮಾಲೆಯನ್ನು ಅರಸನು ತನ್ನ ಕೊರಳಿಗೆ ಹಾಕಿಕೊಂಡು ರಾಜಸಭೆಗೆ ಹೋಗಬೇಕು. ಬಹು ದಿನಗಳಿಂದಲೂ ಇದೇ ಪರಿಪಾಠವು ನಡೆದುಬಂದಿದ್ದಿತು.

ಪೂಜಾರಿಯು ಮುದುಕನಾಗಿದ್ದನು. ಆತನ ಕೂದಲೆಲ್ಲ ಬೆಳ್ಳಗಾಗಿದ್ದವು. ಅವನಿಗೆ ಒಂದು ದಿನ ಮನಸ್ಸಿನಲ್ಲಿ ವಿಚಿತ್ರವಾದೊಂದು ಆಶೆಯುಂಟಾಯಿತು. ಇಷ್ಟು ದಿನಗಳಿಂದಲೂ ನಾನು ದೇವರ ಪ್ರಸಾದ ರೂಪದ ಹೂವಿನ ಮಾಲೆಯನ್ನು ಅರಮನೆಗೆ ಒಯ್ದು ಕೊಡುತ್ತಲಿದ್ದೇನೆ. ಅರಸನು ಅದನ್ನು ಧರಿಸಿಕೊಳ್ಳುವನು. ಆದರೆ ಆ ಹೂವಿನ ಮಾಲೆಯನ್ನು ನಾನು ಒಂದು ದಿನವಾದರೂ ಧರಿಸಿಕೊಳ್ಳಕೂಡದೇಕೆ? ಅರಮನೆಯಿಂದಲೇ ಆ ಮಾಲೆಯನ್ನು ಒಯುತ್ತಿರುವದಾದರೂ ದೇವರ ಪ್ರಸಾದವನ್ನು ಅರ್ಚಕನಾದ ನಾನು ಧರಿಸಿಕೊಂಡರೆ ದೋಷವೇನು? ಎಂದು ಮುಂತಾಗಿ ಯೋಚಿಸಿ ಒಂದು ದಿನ ರಾತ್ರಿ ಆ ಹೂವಿನ ಮಾಲೆಯು ತಾನು ಹಾಕಿಕೊಂಡನು. ಮಾರನೆಯ ದಿನ ಬೆಳಿಗ್ಗೆ ನಿತ್ಯದಂತೆ ಮಾಲೆಯನ್ನು ಅರಮನೆಗೆ ಒಯ್ದು ಮುಟ್ಟಿಸಿ ಬಂದನು.

ಅರಸನು ದರಬಾರಕ್ಕೆ ಹೊರಡುವ ಹೊತ್ತಿಗೆ ರಾಜದೂತನೊಬ್ಬನು ಶಿವಾಲಯದ ಪೂಜಾರಿಯ ಮನೆಗೆ ಬಂದು—“ಮಹಾರಾಜರ ಅಪ್ಪಣೆಯಾಗಿದೆ, ಈಗಲೇ ಹೊರಡಬೇಕೆಂದು” ಅವಸರದಿಂದ ಕರೆದನು. ಪೂಜಾರಿಯು ಗಾಬರಿಯಾಗಿ “ಏನಪ್ಪಾ ಇದು? ಅಕಾಲದಲ್ಲಿ ಮಹಾರಾಜರು ನನ್ನನ್ನೇಕೆ ಕರೆದಿರುವರು? ರಾಜರು ದರಬಾರಕ್ಕೆ ಹೋಗಿಲ್ಲವೇ? ಎಂದನು.

ರಾಜದೂತನು “ಅದೆಲ್ಲಾ ನನಗೆ ಗೊತ್ತಿಲ್ಲ; ಅರಮನೆಗೆ ಬಂದರೆ ಎಲ್ಲವೂ ತಾನೇ ತಿಳಿಯುವದು. ಇಲ್ಲಿ ನಿಂತು ಮಾತು ಬೆಳಿಸಿ ತಡಮಾಡಿದರೆ ನಾನೂ ನೀವೂ ಕೂಡಿಯೇ ತಪ್ಪಗಾರರಾಗಬೇಕಾದೀತು. ಬೇಗನೆ ಹೊರಡಿರಿ.” ಎಂದನು.

ಪೂಜಾರಿಯು ಮನಸ್ಸಿನಲ್ಲಿ ಮಹಾರಾಜರು ನನ್ನನ್ನು ಯಾಕೆ ಕರೆದಿದ್ದಾರು? ನಾನು ಏನು ತಪ್ಪು ಮಾಡಿದ್ದೇನೆ. ನಾನು ನಿನ್ನೆ ದೇವರ ಮಾಲೆಯನ್ನು ಕೊರಳಿಗೆ ಹಾಕಿಕೊಂಡದ್ದನ್ನು ಯಾರಾದರೂ ಮಹಾರಾಜರಿಗೆ ತಿಳಿಸಿರಬಹುದೇ? ಛೇ! ಎಂದಿಗೂ ಆಗದ ಮಾತು. ನಾನು ಮಾಲೆಯನ್ನು ಕೊರಳೊಳಗೆ ಹಾಕಿಕೊಂಡದ್ದನ್ನು ಯಾರು

ನೋಡಿದ್ದಾರೆ? ಮಹಾರಾಜರಿಗೆ ಇದು ಗೊತ್ತಾಗುವ ಬಗೆ ಹೇಗೆ? ಇತ್ಯಾದಿ ವಿಚಾರ ಮಾಡುತ್ತಿರುವಷ್ಟರಲ್ಲಿ ಅರಮನೆಗೆ ಮುಟ್ಟಿದನು. ಅರಸನು ದರಬಾರಿನ ವಸ್ತ್ರಾಲಂಕಾರಗಳನ್ನೆಲ್ಲ ಧರಿಸಿಕೊಂಡಿದ್ದನು. ಅವನ ಮುಂದಿರುವ ಬಂಗಾರದ ಬಟ್ಟಲದಲ್ಲಿ ಹೂವಿನ ಮಾಲೆಯಿದ್ದಿತು. ಪೂಜಾರಿಯನ್ನು ನೋಡಿದೊಡನೆಯೇ ಸಿಟ್ಟಿನಿಂದ "ಏನು ಜೋಯಿಸರೇ! ಮನುಷ್ಯನು ಮುದುಕನಾದ ಬಳಿಕ ಅವನ ಬುದ್ಧಿಯು ಮಸುಳಿಸುವಂತೆ ತೋರುವದು. ರಾಜವಾಡೆಯ ನಿಯಮಗಳನ್ನು ಮುರಿದು ಮನಬಂದಂತೆ ನಡೆದರೆ ಎಂಥ ಶಿಕ್ಷೆಗೆ ಗುರಿಯಾಗಬೇಕಾಗುವದೆಂಬದು ನಿಮಗೆ ಗೊತ್ತಿಲ್ಲವೋ? ಗೊತ್ತಿದ್ದರೂ ಮುಪ್ಪಿನಿಂದ ಮರೆತು ಹೋದಂತೆ ತೋರುತ್ತಿದೆ." ಎಂದನು.

ಪೂಜಾರಿ:—ಮಹಾರಾಜರವರಿಗೆ ದೇವರು ಕಲ್ಯಾಣಮಾಡಲಿ? ರಾಜವಾಡೆಯ ನಿಯಮಗಳನ್ನು ಮೀರಿ ನಡೆದವರಿಗೆ ದೇಹಾಂತ ಶಿಕ್ಷೆಯೇ ಯೋಗ್ಯವಾದುದು. ನನ್ನ ತಿಳುವಳಿಕೆಯ ಮೇರೆಗೆ ನಾನು ಅಂತಹ ಅಪರಾಧವನ್ನೇನೂ ಮಾಡಿಲ್ಲವೆಂದು ಸನ್ನಿಧಿಯಲ್ಲಿ ಅರಿಕೆ ಮಾಡಿಕೊಳ್ಳುವೆನು.

ಮಹಾರಾಜನು ತನ್ನ ಸಂಗಡ ಮಾತಾಡುತ್ತಿರುವಾಗ ಮುಂದಿರುವ ಹೂವಿನ ಮಾಲೆಯನ್ನೇ ದಿಟ್ಟಿಸಿ ನೋಡುತ್ತಿದ್ದುದನ್ನು ನೋಡಿ ಪೂಜಾರಿಯ ಎದೆಯು ಬಹು ವೇಗದಿಂದ ಹಾರತೊಡಗಿತು. ತನ್ನ ಅಪರಾಧವು ಹೇಗೋ ಬಯಲಿಗೆ ಬಂದಿರುವದೆಂದೂ ತನಗೆ ಕಠಿಣವಾದ ಶಿಕ್ಷೆಯು ತಪ್ಪಿದ್ದಲ್ಲವೆಂದೂ ಅತನು ತಿಳಿದನು.

ಪೂಜಾರಿಯ ಮಾತುಗಳನ್ನು ಕೇಳಿ ಅರಸನು ಸಂತಾಪಗೊಂಡು "ಇಲ್ಲಿ ನೋಡಿರಿ." ಎಂದು ಹೂವಿನ ಮಾಲೆಯನ್ನು ತೋರಿಸಿ ನೀವು ಈ ಹೂವಿನ ಮಾಲೆಯನ್ನು ಧರಿಸಿಕೊಂಡಿದ್ದಿಲ್ಲವೇ? ಒಂದು ತಪ್ಪು ಮುಚ್ಚಿಕೊಳ್ಳಲು ಯತ್ನಿಸಿ ಇನ್ನೊಂದು ತಪ್ಪು ಮಾಡುತ್ತಿರುವೆನೆಂಬದನ್ನು ಜನರು ಮರೆತುಬಿಡುವರು."ಎಂದನು.

ಈಗ ಪೂಜಾರಿಯ ಮೋರೆಯು ಕಳೆಯಿಳಿದು ಕೈಕಾಲು ನಡುಗಹತ್ತಿದವು. ಆದರೂ ಧೈರ್ಯವನ್ನವಲಂಬಿಸಿ ದೇವರು ಮಾಡಿದಂತಾಗಲಿ ಎಂದಂದುಕೊಂಡು—"ಮಹಾರಾಜರೇ ನಾನು ಸುಳ್ಳು ಹೇಳಲಾರೆನು. ಈ ಮಾಲೆಯನ್ನು ನಾನು ಧರಿಸಿಕೊಂಡಿಲ್ಲ."

ಅರಸನು:—ಸರಿ. ಸರಿ. ಹುಚ್ಚೂ ಮುಪ್ಪೂ ಕೂಡಿದಂತಾಯಿತು. ಕಾಣುವ ಕಣ್ಣಿಗೆ ಕನ್ನಡಿಯೇಕೆಬೇಕು? ಈ ಮಾಲೆಯೊಳಗಿನ ಬಿಳಿಯ ಕೂದಲು ಯಾರದು ನೋಡಿರಿ. ನಿನ್ನೆ ನೀವು ಮಾಲೆಯನ್ನು ಧರಿಸಿಕೊಂಡಿದ್ದು ಅದನ್ನು ತೆಗೆಯುವಾಗ ನಿಮ್ಮ ಬಿಳಿಯ ಕೂದಲು ಅದರಲ್ಲಿ ತೊಡಕಿಕೊಂಡದ್ದು ನಿಮ್ಮ ಮುಪ್ಪಿನ ಕಣ್ಣಿಗೆ ಕಾಣಿಸಿರಲಿಲ್ಲ. ಮುಪ್ಪಿನಿಂದ ಕಣ್ಣು ಮಂದವಾದಂತೆ ನಿಮ್ಮ ಬುದ್ಧಿಯೂ ಮಂದವಾಗಿ ಹೋಗಿದೆ. ಪೂಜಾರಿಯು ಪುನಃ ಧೈರ್ಯದಿಂದ ಇಂದಿನ ಸಾವು ನಾಳೆಗೆ ಬೀಳಲಿ. ಎಂದು ಯೋಚಿಸಿ "ಮಹಾರಾಜರೇ, ಇದಕ್ಕಾಗಿಯೇ ತಾವು ನಾನು ಮಾಲೆಯನ್ನು ಹಾಕಿಕೊಂಡಿದ್ದೆನೆಂದು ತರ್ಕಸೋಣವಾಯಿತೇ? ಇದು ನನ್ನ ಕೂದಲಲ್ಲ. ನಮ್ಮ ಶಿವಾ

ಲಯದೊಳಗಿನ ಶಂಕರನ ಕೂದಲಿದು! ಈಗ ಕೆಲವು ದಿನಗಳಿಂದಲೂ ಆತನ ಕೂದಲು ಒಂದೊಂದಾಗಿ ಬೆಳ್ಳಗಾಗುತ್ತಬಂದಿದೆ. ಪ್ರಸಾದದ ಮಾಲೆಯನ್ನು ತೆಗೆಯುವಾಗ ಅದಕ್ಕೆ ಈ ಕೂದಲು ತೊಡಕಿಕೊಂಡಿರುವದು. ನಾನು ನಿರಪರಾಧಿಯು!" ಎಂದನು.

ಅರಸನು ಆಶ್ಚರ್ಯದಿಂದ ವಿಸ್ಮಿತನಾದನು. "ಜೋಕೆ! ಸುಳ್ಳಿಗೆ ಸುಖವಿಲ್ಲ ವೆಂಬದನ್ನು ಮರೆತು ಮಾತಾಡಿದರೆ ಇಂದಿಲ್ಲ ನಾಳೆಯಾದರು ನಿಜವಾದ ಸಂಗತಿಯು ಹೊರಗೆ ಬಾರದಿರದು" ಎಂದನು.

**ಪೂಜಾರಿ:**—ಮಹಾರಾಜ. ಸುಳ್ಳಿಗೆ ಸುಖವಿಲ್ಲದಂತೆಯೇ ಸತ್ಯಕ್ಕೆ ಸಾವಿಲ್ಲವೆಂಬ ದನ್ನೂ ತಿಳಿದಿದ್ದೇನೆ. ತಾವು ನಾಳೆ ಮುಂಜಾನೆ ಶಿವಾಲಯಕ್ಕೆ ಬಂದು, ನನ್ನ ಹೇಳಿಕೆ ಯನ್ನು ಮನಗಂಡು ಮುಂದೆ ನನಗೆ ಎಂಥ ಶಿಕ್ಷೆಯನ್ನು ವಿಧಿಸಿದರೂ ಆನಂದದಿಂದ ಅನುಭವಿಸುವೆನು.

**ಅರಸು:**—ಆಗಲಿ, ನಾನು ನಾಳೆ ಮುಂಜಾನೆ ಪರಿವಾರದೊಂದಿಗೆ ಶಿವಾಲಯಕ್ಕೆ ಬರುವೆನು. ಎಂದು ನುಡಿದು ದರ್ಬಾರಕ್ಕೆ ನಡೆದನು.

**ಪೂಜಾರಿಯು** ಅರಮನೆಯಿಂದ ಹೊರಟವನು ಮನೆಗೆ ಹೋಗಲಿಲ್ಲ. ಶಿವಾ ಲಯಕ್ಕೆ ಹೋಗಿ ದೇವರ ಪ್ರತಿಮೆಯ ಮುಂದೆ ಕುಳಿತು ಮೋಹಮೂಲಕವಾಗಿ ಘಟಿ ಸಿದ ತನ್ನ ತಪ್ಪಿಗಾಗಿ ಪಶ್ಚಾತ್ತಾಪಪಟ್ಟು ತನ್ನನ್ನು ರಕ್ಷಿಸಬೇಕೆಂದು ಭಕ್ತಿಪೂರ್ವಕವಾಗಿ ಬೇಡಿಕೊಂಡನು. ಅರಸನು ಬಂದು ತನಗೆ ವಿಧಿಸುವ ಶಿಕ್ಷೆಯನ್ನು ನಿನ್ನ ಇದಿರಿನಲ್ಲಿಯೇ ಅನುಭವಿಸುವೆನೆಂದೂ ನನ್ನ ಜೀವನಮರಣಗಳೆರಡೂ ನಿನ್ನನ್ನೇ ಅವಲಂಬಿಸಿರುವವೆಂದೂ ವಿಶುದ್ಧ ಹೃದಯದಿಂದ ಪ್ರಾರ್ಥಿಸಿ ಅಲ್ಲಿಯೇ ಕುಳಿತುಬಿಟ್ಟನು. ಆತನು ಮನಸ್ಸುಮಾಡಿ ದ್ದರೆ ಆ ರಾತ್ರಿ ಜಯಪುರದಿಂದ ಓಡಿಹೋಗಿ ಜೀವವನ್ನು ಉಳಿಸಿಕೊಳ್ಳಲು ಯತ್ನಿಸ ಬಹುದಾಗಿತ್ತು. ಆದರೆ ಈಶ್ವರನ ಶಕ್ತಿಯಲ್ಲಿ ಸಂಪೂರ್ಣ ವಿಶ್ವಾಸವುಳ್ಳ ಆತನು ತನ್ನ ತಪ್ಪಿಗಾಗಿ ಪಶ್ಚಾತ್ತಾಪಪಟ್ಟು ಆ ದಯಾನಿಧಿಯನ್ನೇ ಮರೆಹೊಕ್ಕು ತನಗೊದಗಿದ ಸಂಕ ಟದಿಂದ ಪಾರಾಗಲು ಯತ್ನಿಸಿದನು

**ಪೂಜಾರಿಯ** ಪ್ರಯತ್ನವು ಫಲಿಸಿತು. ಮಾರನೆಯ ದಿನ ಮುಂಜಾನೆ ಅರಸನು ಶಿವಾಲಯಕ್ಕೆ ಬಂದು ನೋಡುವಷ್ಟರಲ್ಲಿ ಶಿವನ ಪ್ರತಿಮೆಯ ತಲೆತುಂಬ ಬೆಳ್ಳಿಯಂಥ ಬಿಳಿಯ ಕೂದಲು ಒಪ್ಪುತ್ತಿದ್ದಿತು. ಅರಸನು ತನ್ನ ತಪ್ಪುತಿಳುವಳಿಕೆಯೋ ಪೂಜಾರಿಯ ಭಕ್ತಿಯ ಮಹಿಮೆಯೋ ಎಂದು ಯೋಚಿಸುತ್ತ ಈಶ್ವರಪ್ರತಿಮೆಯನ್ನು ವಂದಿಸಿ ಪ್ರಸಾದ ವನ್ನು ಸ್ವೀಕರಿಸಿ ಮನೆಗೆ ತಿರುಗಿದನು.

**ಸಾಂ॥ ತಪ್ಪುತಡೆಗಳನ್ನೆಲ್ಲ ಒಪ್ಪಿಕೊಳ್ಳುವ ಜಗದ ।**
**ಬೊಪ್ಪ ಶ್ರೀಹರಿಯೊಳು ತನ್ನ ॥**
**ತಪ್ಪೊಪ್ಪುಗಳನ್ನೆಲ್ಲ ಭಕ್ತಿಯೊಳರ್ಪಿಸೆ ।**
**ತಪ್ಪದಲೆ ಕ್ಷಮಿಸಿ ರಕ್ಷಿಪನು ॥ ೧ ॥**

## ೨೬. ಅಹಂಕಾರಿಯಾದ ಸಾವುಕಾರನು.



ಒಮ್ಮೆ ಶ್ರೀರಾಮಕೃಷ್ಣ ಪರಮಹಂಸರು ತಮ್ಮ ಶಿಷ್ಯರೊಡನೆ ಸಂಚಾರಕ್ಕಾಗಿ ಹೊರಟಿದ್ದರು. ಊರೊಳಗಿನ ಸಾವುಕಾರನ ಮನೆಯ ಮುಂಗಡೆಯಿಂದ ಹಾಯ್ದುಹೋಗುತ್ತಿರುವಾಗ ಅವರ ಪ್ರಿಯ ಶಿಷ್ಯನೊಬ್ಬನು ಹತ್ತಿರ ಬಂದು ಸ್ವಾಮೀ, ಈ ಎದುರಿಗಿರುವ ಮನೆಯ ಅಟ್ಟಹಾಸವನ್ನು ನೋಡಿದಿರಾ, ಇದರ ಯಜಮಾನನು ಕೋಟ್ಯಾಧೀಶನು. ಆದರೆ ಅವನಲ್ಲೊಂದು ದುರ್ಗುಣವು ವಾಸವಾಗಿದೆ. ಲೋಕದಲ್ಲಿ ತನ್ನಷ್ಟು ಸಂಪತ್ತುಳ್ಳ ಜನರೇ ಇಲ್ಲವೆಂದು ಆತನು ತಿಳಿದಿರುವನು. ಅವನ ಅಹಂಕಾರದ ನಡತೆಯಿಂದ ಜನರಿಗೆ ಪರಿಪರಿಯ ಪೀಡೆಯು ಪ್ರತಿನಿತ್ಯ ಸಂಭವಿಸುತ್ತಿದೆ. ತಮ್ಮಂಥ ಮಹಾಪುರುಷರ ಸಂಸರ್ಗದಿಂದ ಆತನ ದುರಭಿಮಾನವು ಕಡಿಮೆಯಾದರೂ ಆಗಬಹುದು. ಅನಾಯಾಸವಾಗಿ ಇದೊಂದು ಪರೋಪಕಾರದ ಕೆಲಸವು ಘಟಿಸುವಂತಿದ್ದರೆ ತಾವು ಅದನ್ನು ಏಕೆ ಮಾಡಕೂಡದು? ಎಂದನು.

ಸ್ವಾಮಿಯವರು ಶಿಷ್ಯನ ಮಾತು ಕೇಳಿ ನಕ್ಕು, "ತಮ್ಮಾ. ನೀನನ್ನುವದು ನಿಜವೇ ಸರಿ. ಆದರೆ ನಾನು ಈಗಲೇ ಆತನ ಬಳಿಗೆ ಬರಲಾರೆನು. ಅಹಂಕಾರದಿಂದ ಅಂಧರಾದವರಿಗೆ ಬರೇ "ಕಣ್ಣ ಕನ್ನಡಿ"ಯಿಂದ ಪ್ರಯೋಜನವಾಗಲಾರದು. ಅವರ ಕಣ್ಣಿಗೆ ಆಪತ್ತಿನ ಅಂಜನವನ್ನು ಹಾಕಿದರೆ ಅಹಂಕಾರಜನ್ಯವಾದ ಮಲವೆಲ್ಲವೂ ತೊಳೆದು ಹೋಗಿ ಮೇಲಿನ ಪರೆ ಕರಗಿ ನಿಚ್ಚಳವಾದ ಬಳಿಕ ಆ ಕಣ್ಣಿಗೆ ದೃಷ್ಟಿಶಕ್ತಿಯು ಬರುವದು. ಆ ಅಂಜನಹಾಕುವ ಕಾರ್ಯವನ್ನು ದೇವರೇ ಮಾಡುತ್ತಿರುವನು. ಅಥವಾ ಹಾಗೆ ಹೇಳುವದರ ಬದಲು ಅವನ ದೈವವು-ಎಂದರೆ ಅಹಂಕಾರ ಮೂಲಕವಾಗಿ ಘಟಿಸುವ ದುಷ್ಕೃತ್ಯಗಳ ಫಲವು-ಈ ಕೆಲಸವನ್ನು ಮಾಡುವದು. ಅದಕ್ಕೆ ತಕ್ಕ ಸಮಯವು ಬರಬೇಕು. ಮಗೂ ನೀನಿನ್ನೂ ಚಿಕ್ಕವನು. ಪ್ರಪಂಚದೊಳಗಿನ ಹಲವು ಗೂಢ ಪ್ರಮೇಯಗಳನ್ನು ನೀನು ಅಭ್ಯಾಸಮಾಡಿಲ್ಲ. ಸತ್ಪುರುಷರು ಯತ್ನಮಾಡಿದರೆ ಅಸಾಧ್ಯವಾದುದು ಯಾವುದಿದೆ? ಆದರೆ ಲೋಕದಲ್ಲಿ ಕತ್ತಲೆಯಿರುವ ಕಾರಣದಿಂದಲೇ ಬೆಳಕಿಗೆ ಮಹತ್ವವುಂಟಾಗಿದೆ. ದುಃಖವಿರುವದರಿಂದಲೇ ಸುಖದ ಸರಿಯಾದ ಕಲ್ಪನೆ ಬರುವದು. ದುಷ್ಟ ಜನರಿರುವದರಿಂದಲೇ ಶಿಷ್ಟರಿಗೆ ಮಾನ್ಯತೆಯುಂಟಾಗಿರುವದು. ನೀನು ಈ ಸಾವುಕಾರನ ವಿಷಯದಲ್ಲಿ ಇಷ್ಟು ಕನಿಕರವುಳ್ಳವನಾಗಿದ್ದರೆ ನಾಳೆ ನೀನೇ ಹೋಗಿ ಯತ್ನಮಾಡಿ ನೋಡು.

ಸ್ವಾಮಿಯವರು ಶಿಷ್ಯನಿಗೆ ಮತ್ತೆ ಕೆಲವು ಸಂಗತಿಗಳನ್ನು ಉಪದೇಶಿಸುತ್ತ ಮುಂದೆನಡೆದರು. ಮಾರನೆಯ ದಿನ ಮುಂಜಾನೆ ಶಿಷ್ಯನು ಸ್ನಾನಸಂಧ್ಯಾದಿ ನಿತ್ಯ

ಕರ್ಮಗಳನ್ನು ಮುಗಿಸಿಕೊಂಡು ಸಾವುಕಾರನ ಮನೆಗೆ ಬಂದನು. ಸಾವುಕಾರನೂ ತನ್ನ ನಿತ್ಯನಿಯಮಗಳನ್ನು ಮುಗಿಸಿ ಚಾವಡಿಗೆ ಬಂದು ಕುಳಿತಿದ್ದನು. ಉಜ್ವಲವಾದ ತೇಜಸ್ಸಿನಿಂದ ಒಪ್ಪುತ್ತಿರುವ ಬ್ರಾಹ್ಮಣನ ಆಗಮನದಿಂದ ಸಾವುಕಾರನ ಮನಸ್ಸಿನಲ್ಲಿ ವಿನಯವು ಒಡೆದುಮೂಡಿದಂತಾಯಿತು. ಅವನು ಬ್ರಾಹ್ಮಣನನ್ನು ಕೂಡ್ರಿಸಿಕೊಂಡು ಕೆಲವು ಕ್ಷೇಮಸಮಾಚಾರದ ಮಾತುಗಳನ್ನು ಕೇಳಿದ ಬಳಿಕ—

ಬ್ರಾಹ್ಮಣ:—ಸಾವುಕಾರರೇ, ತಾವು ಬೇಸಿಗೆಯ ರಾತ್ರಿಯಲ್ಲಿ ಅಡವಿಯ ಗಿಡಗಳ ಮೇಲೆ ಹಾರಾಡುತ್ತಿರುವ ಮಿಂಚು ಹುಳಗಳನ್ನು ನೋಡಿರುವಿರಾ? ನಕ್ಷತ್ರಗಳ ಬೆಳಕು ಈ ಮಿಂಚು ಹುಳುಗಳ ಬೆಳಕನ್ನು ಮೀರುವದಲ್ಲವೇ?

ಸಾವುಕಾರ:—ನೋಡಿದ್ದೇನೆ. ನಕ್ಷತ್ರಗಳ ಬೆಳಕೆಲ್ಲಿ? ಈ ಕ್ಷುದ್ರ ಮಿಂಚು ಹುಳದ ಬೆಳಕೆಲ್ಲಿ?

ಬ್ರಾಹ್ಮಣ:—ಚಂದ್ರೋದಯವಾಯಿತೆಂದರೆ ನಕ್ಷತ್ರಗಳ ಬೆಳಕು ಏನಾಗುವದು.

ಸಾವುಕಾರ:—ಲೋಕವನ್ನೇ ಬೆಳಗುವ ಚಂದ್ರನ ಮುಂದೆ ನಕ್ಷತ್ರಗಳ ಪಾಡೇನು?

ಬ್ರಾಹ್ಮಣ:—ಮುಂಜಾವಿನಲ್ಲಿ ಚಂದ್ರನ ಅವಸ್ಥೆಯೇನಾಗುವದು?

ಸಾವುಕಾರ:—ಪೂರ್ವದಲ್ಲಿ ಅರುಣೋದಯವಾದೊಡನೆಯೇ ಚಂದ್ರನ ಕಳೆಯಿಳಿದು ಹೋಗುವದು.

ಬ್ರಾಹ್ಮಣ:—ಸ್ವಾಮೀ, ಈ ಈಶ್ವರನ ಸೃಷ್ಟಿಯೊಳಗಿನ ಪ್ರಮೇಯವನ್ನು ಮನುಷ್ಯರು ತಮ್ಮ ಸ್ಥಿತಿಗತಿಗಳಿಗರಿಹಚ್ಚಿ ನೋಡುತ್ತಿರಬೇಕು. ನಾಲ್ಕು ದುಡ್ಡು ಕೈಯಲ್ಲಿ ಓಡಾಡುತ್ತಿರುವ ಸಾವುಕಾರರು ತಮ್ಮಷ್ಟು ಧನಿಕರೇ ಇಲ್ಲವೆಂದು ಅಹಂಕಾರ ಪಡುವದು ಮಿಂಚುಹುಳು ತನ್ನಿಂದಲೇ ಲೋಕಕ್ಕೆಲ್ಲ ಬೆಳಕೆಂದು ಹೇಳಿಕೊಳ್ಳುವಂತಾಗುವದು. ಅಖಿಲ ಜಗತ್ತಿನ ಸೃಷ್ಟಿಸ್ಥಿತಿಗಳಿಗೆ ಕಾರಣನಾದ ಭಗವಂತನನ್ನು ಮರೆತು ನಡೆಯುವದು ಸರಿಯಲ್ಲ.

ಸತ್ಸಹವಾಸದಿಂದ ನಮ್ರನಾದ ಸಾವುಕಾರನ ಮನಸ್ಸಿನಲ್ಲಿ ಸದುಪದೇಶ ಬೀಜವು ಮೊಳೆತು ಫಲಫಲಿಸಿತು. ಅಂದಿನಿಂದ ಅವನು ತನ್ನ ಸಂಪತ್ತಿನ ಗರ್ವವನ್ನು ಬಿಟ್ಟು ಬಿಟ್ಟನು. ದೇವರು ತನಗೆ ದಯಪಾಲಿಸಿರುವ ಸಂಪತ್ತು ದೀನಾನಾಥರ ರಕ್ಷಣೆಗಾಗಿಯೇ ಸರಿ ಎಂದು ತಿಳಿದು ಸದಾ ವಿನಯದಿಂದ ನಡೆದು ಅದರ ಸದ್ವಿನಿಯೋಗ ಮಾಡತೊಡಗಿದನು.

ಸಾಂ॥ ಮಿನುಗುವ ಮಿಂಚುಳವು ತನ್ನಲ್ಪ ಗುಣಮದದೆ।
ಅನುಪಮದ ರವಿಯ ಮರೆವಂತೆ॥
ಧನವಂತರಾದವರು ತಮ್ಮಲ್ಪ ಧನಮದದೆ।
ಘನಮಹಿಮನನೆ ಮರೆವರಲ್ತೆ॥ ೧॥

---

## ೨೭. ಬ್ರಾಹ್ಮಣನೂ ಅವನ ಶಿಷ್ಯನೂ.



ಒಬ್ಬ ಬ್ರಾಹ್ಮಣನು ತನ್ನ ಶಿಷ್ಯನಿರುವ ನೆರೆಯೂರಿಗೆ ಹೊರಟಿರಲು ದಾರಿಯಲ್ಲಿ ದಣಿದು ತನ್ನ ಗಂಟನ್ನು ಹೊರುವದಕ್ಕೆ ಒಬ್ಬ ಆಳು ಸಿಕ್ಕರೆ ಒಳ್ಳೆಯದಾಗುತ್ತಿತ್ತೆಂದು ಯೋಚಿಸುತ್ತಿರುವಷ್ಟರಲ್ಲಿ ಒಬ್ಬ ದಾರಿಹೋಕನು ಇದಿರಿಗೆ ಬಂದನು. ಆಗ ಬ್ರಾಹ್ಮಣನು ಅವನನ್ನು ನೋಡಿ "ಅಣ್ಣಾ ಈ ಗಂಟನ್ನು ತೆಗೆದುಕೊಂಡು ನೆರೆಯ ಊರಿನವರೆಗೆ ಬರುವೆಯಾ? ನಿನಗೆ ಚನ್ನಾಗಿ ಊಟಮಾಡಿಸುವೆನು ನನ್ನ ಶಿಷ್ಯರಿಗೆ ಹೇಳಿ ನಾಲ್ಕು ದುಡ್ಡುಗಳನ್ನೂ ಕೊಡಿಸುವೆನು." ಎಂದನು. ಆಗ ಆ ದಾರಿಹೋಕನು:—"ಸ್ವಾಮೀ, ತಮ್ಮ ಮಾತು ಮೀರಲಾರೆನು. ಆದರೆ ನಾನು ಅಸ್ಪೃಶ್ಯಕುಲಕ್ಕೆ ಸೇರಿದವನು. ತಮ್ಮ ಗಂಟನ್ನು ಮುಟ್ಟುವದು ಹೇಗೆ? ನಾನು ಬಡವನು. ಇಂದಿನ ದಿನ ಕಳೆದರೆ ಅಷ್ಟೇ ಸಾಕೆನ್ನುವಷ್ಟು ನನ್ನ ಮನೆತನದ ಸ್ಥಿತಿಯಾಗಿದೆ. ಆದರೂ ಸತ್ಯವನ್ನು ಮುಚ್ಚಿಟ್ಟು ಧರ್ಮಮಾರ್ಗವನ್ನು ಮೀರಿ ನಡೆದು ತಮ್ಮ ಕುಲಾಚಾರಕ್ಕೆ ಕಲಂಕ ತರುವದು ಸರಿಯಲ್ಲ." ಎಂದನು.

ಬ್ರಾಹ್ಮಣನಿಗೆ ಬೇರೆ ದಾರಿ ತೋರಲಿಲ್ಲ. ಗಂಟು ಭಾರವಾಗಿ ಮುಂದೆ ಸಾಗುವದು ಅಸಾಧ್ಯವಾಗಿತ್ತು. ಅವನು ಒಂದು ಯುಕ್ತಿಯನ್ನು ಹೇಳಿದನು. "ತಮ್ಮಾ, ನೀನು ಹೇಳುವ ಮಾತು ಸರಿ. ಆದರೂ ನನಗೆ ಬೇರೆ ದಾರಿ ತೋರದಾಗಿದೆ. ನೀನು ಅಸ್ಪೃಶ್ಯನೆಂದು ಯಾರಿಗೂ ಹೇಳಬೇಡ. ರಾತ್ರಿ ಆ ಊರಿಗೆ ಮುಟ್ಟಿದ ಬಳಿಕ ನೀನು ಯಾರ ಸಂಗಡಲೂ ಮಾತನ್ನೇ ಆಡಬೇಡ. ನಮ್ಮ ಶಿಷ್ಯನ ಮನೆಯ ಹೊರಗಿನ ಪಡಸಾಲೆಯಲ್ಲಿ ಮಲಗಿಕೊಂಡಿರು. ಎಲ್ಲರಿಗೂ ಊಟವಾದ ಬಳಿಕ ನಿನ್ನನ್ನು ಊಟಕ್ಕೆ ಎಬ್ಬಿಸುವೆನು. ನೀನು ಊಟಮಾಡಿ ಅಲ್ಲಿಯೇ ಮಲಗಿರು. ಮುಂಜಾನೆ ನಾವಿಬ್ಬರೂ ತಿರುಗಿ ಬಂದುಬಿಡೋಣ ಎಂದನು. ದಾರಿಕಾರನು ಬ್ರಾಹ್ಮಣನ ಹೇಳಿಕೆಯನ್ನು ಒಪ್ಪಿಕೊಂಡನು. ಇಬ್ಬರೂ ಮುಂದೆ ಸಾಗಿದರು.

ಬ್ರಾಹ್ಮಣನು ಶಿಷ್ಯನ ಮನೆಗೆ ಮುಟ್ಟಿದನು. ಆಳು ಹೊರಗಿನ ಪಡಸಾಲೆಯಲ್ಲಿ ಗಂಟು ಇಟ್ಟು ಅಲ್ಲಿಯೇ ಕುಳಿತನು. ಬ್ರಾಹ್ಮಣನು ಒಳಗೆ ಹೋದನು.

ತುಸು ಹೊತ್ತಿನ ತರುವಾಯ ಪರಸ್ಥಳದಿಂದ ಬೇರೊಬ್ಬ ಬ್ರಾಹ್ಮಣನು ಅಲ್ಲಿಗೆ ಬಂದನು. ಅವನು ಪಡಸಾಲೆಯಲ್ಲಿ ಕುಳಿತಿರುವ ಆಳುಮಗನನ್ನು ನೋಡಿ, "ಏನಪ್ಪಾ ಯಜಮಾನರು ಏನು ಮಾಡುತ್ತಿದ್ದಾರೆ?" ಎಂದನು.

ಆಳುಮಗನು ತನ್ನ ಯಜಮಾನನ ಮಾತು ಮರೆತಿರಲಿಲ್ಲ. ಬ್ರಾಹ್ಮಣನಿಗೆ ಅವನು ಉತ್ತರ ಹೇಳದೆ ಸುಮ್ಮನೆ ಕುಳಿತನು. ಬ್ರಾಹ್ಮಣನು ಪುನಃ ಅದೇ ಮಾತು ಕೇಳಿ ಆಗಲೂ ಉತ್ತರ ಕೊಡದಿರಲು ಕೋಪಗೊಂಡು—"ಏನಯ್ಯಾ ನೀನೇನು ಪಂಚಮ

ನೋ ವೃದ್ಧಬ್ರಾಹ್ಮಣನು ಬಂದು ಯಜಮಾನರನ್ನು ಕೇಳಿದರೆ ಕಲ್ಲು ಕೂತ ಹಾಗೆ ಕುಳಿತಿದ್ದೀಯೆ?" ಎಂದು ಗದ್ದರಿಸಿದನು.

ಆಳುಮಗನು ಅಂಜಿದನು. ಇವರಿಗೆ ತನ್ನ ಗುರುತು ಹತ್ತಿತೆಂದು ಅವನು ತಿಳಿದು ಗಾಬರಿಯಾಗಿ ತಪ್ಪಾಯಿತು, ಸ್ವಾಮೀ, ತಪ್ಪಾಯಿತು. ನಾನು ಇನ್ನು ಹೀಗೆ ಮಾಡುವದಿಲ್ಲ. ಎಂದು ನಡುಗುತ್ತ ನಿಂತನು.

ಪಡಸಾಲೆಯಲ್ಲಿ ನಡೆದಿರುವ ಗದ್ದಲವನ್ನು ನೋಡಿ ಮನೆಯವರೂ ಬ್ರಾಹ್ಮಣನೂ ಹೊರಗೆ ಬಂದರು. ಆಳು ಇವರೆಲ್ಲರೂ ಕೂಡಿ ತನ್ನನ್ನು ಹೊಡೆಯುವರೇನೋ ಎಂದು ಅಂಜಿ ಓಡಿಹೋಗಿಬಿಟ್ಟನು.

ಬ್ರಾಹ್ಮಣನು ನಡೆದ ವೃತ್ತಾಂತವನ್ನು ಕೇಳಿ ಮನಸ್ಸಿನಲ್ಲಿ ದೇವರೇ ಪಾರುಮಾಡಿದನು. ಎಂದು ಯೋಚಿಸಿ, ಬಹಿರಂಗವಾಗಿ—ಪರಸ್ಥಳದವನು. ನಿಮ್ಮ ಮಾತು ಸರಿಯಾಗಿ ತಿಳಿದಿರಲಿಕ್ಕಿಲ್ಲ. ಆದಕ್ಕಾಗಿ ನೀವು ಇಷ್ಟು ಕೋಪಿಸಿಕೊಳ್ಳಬೇಕೇ ಎಂದು ಏನೇನೋ ಸಮಾಧಾನ ಹೇಳಿ ಒಳಗೆ ಕರೆದುಕೊಂಡು ಹೋದನು.

ಪ್ರಪಂಚದಲ್ಲಿಯೂ ಇದೇ ಸ್ಥಿತಿಯಿರುವದು. ಈಶ್ವರ ಪ್ರಸಾದವನ್ನು ಬಯಸುವ ಪಾರಮಾರ್ಥಸಾಧಕನು ಆತ್ಮಜ್ಞಾನಸಾಧನೆಯ ಮಾರ್ಗದಲ್ಲಿ ಪ್ರಪಂಚದ ಮಾಯೆಯ ಸ್ವರೂಪವನ್ನು ತಿಳಿದಕೂಡಲೆ ಮಾಯೆಯು ತನ್ನ ಗುಟ್ಟು ಹೊರಬಿದ್ದಿತೆಂದು ಭಾವಿಸಿ ತನಗೆ ಇನ್ನು ಇಲ್ಲಿ ಸ್ಥಳವಿಲ್ಲವೆಂದು ತಿಳಿದು ಓಡಿಹೋಗಿ ಬಿಡುವದು. ಸಾಧಕನಿಗೆ ಎಲ್ಲಿಯವರೆಗೆ ಮಾಯೆಯ ಸ್ವರೂಪಜ್ಞಾನವುಂಟಾಗುವದಿಲ್ಲವೋ ಅಲ್ಲಿಯವರೆಗೆ ಅದು ತನ್ನ ಸ್ಥಾನಮಾನಗಳ ಅಳತೆಯನ್ನು ಅರಿತಿದ್ದರೂ ಪೂರ್ವಸಂಸ್ಕಾರ ಸಂಚಿತಗಳ ಸಂಚಿನಿಂದ ಒಳಸೇರಿ ತನ್ನ ಹೀನಸ್ಥಿತಿಯನ್ನು ಮರೆಯಿಸಿಕೊಂಡಿರುವದು. ಅದರ ಸ್ವರೂಪಜ್ಞಾನವುಂಟಾದೊಡನೆಯೇ ತನ್ನ ಹೀನ ಕುಲವನ್ನೂ ತನ್ನ ಅಸ್ಪೃಶ್ಯತೆಯನ್ನೂ ಅರಿತಿರುವ ಮಾದಿಗ ಆಳಿನಂತೆ ಮಾಯೆಯು ತಾನಾಗಿ ಓಡಿಹೋಗಿಬಿಡುವದು. ಪಿಶಾಚಗ್ರಸ್ತನಾದವನಿಗೆ ತನ್ನ ಸ್ಥಿತಿಯ ತಿಳಿವು ಬಂದೊಡನೆಯೇ ಅದರ ಪ್ರಾಬಲ್ಯವು ಕುಂದಿಹೋಗಿ ಪಿಶಾಚಿಯು ತೊಲಗಿಹೋಗುವದು. ಇದೇರೀತಿಯಾಗಿ ಮಾಯಾಪಿಶಾಚಗ್ರಸ್ತನಾದ ಜೀವನಿಗೆ ತಾನು ಮಾಯಾಮೋಹಿತನೆಂಬ ತಿಳಿವು ಬಂದೊಡನೆಯೇ ಆ ಮಾಯಾಬಂಧನದಿಂದ ಬಿಡುಗಡೆಹೊಂದುವನು. ಕಳ್ಳನನ್ನು ಕಂಡುಹಿಡಿಯಲು ಯತ್ನಿಸಿದರೆ ಅವನು ಹೇಗೆ ಓಡಿಹೋಗುವನೋ ಹಾಗೆ ಮಾಯೆಯು ಅದನ್ನು ಶೋಧಿಸತೊಡಗಿದವರಿಂದ ತೊಲಗಿ ಹೋಗಿಬಿಡುವದು.

ಸಾಂ॥ ಮನವನಾವರಿಸಿರುವ ಮಾಯೆಯ ರೂಪವ ।
ಘನಸಾಧನೆಯೊಳರಿಯಲ್ಕೆ ॥
ಮನವ ಬಿಟ್ಟೋಡುವದದು ಕದ್ದಕಳ್ಳನು ।
ಮನೆಯವರ ಕಂಡೋಡುವಂತೆ ॥ ೧ ॥

## ೨೮. ಮಾಯೆಯ ಸ್ವರೂಪ.



ಒಂದು ದಿನ ನಾಲ್ಕೈದು ವರ್ಷದ ಮಗುವೊಂದು ಪಡಸಾಲೆಯಲ್ಲಿ ಆಡುತ್ತಿದ್ದಾಗ ದೂರದಲ್ಲಿ ಹುಲಿಯ ಮುಖವನ್ನು ಹಾಕಿಕೊಂಡ ಆಳುಮಗನು ಮನೆಯ ಕಡೆಗೆ ಬರುವುದನ್ನು ನೋಡಿ ಅಂಜಿ ಚಿಟ್ಟನೆ ಚೀರಿ ತಾಯಿಯ ಬಳಿಗೆ ಹೋಗಿ “ಅಮ್ಮಾ ಹುಲಿ-ಹುಲಿ” ಎಂದು ಅಳತೊಡಗಿತು. ತಾಯಿಯು ಮಗುವನ್ನು ಎತ್ತಿಕೊಂಡು “ಮಗೂ ಎಲ್ಲಿಯೋ ಹುಲಿ” ಎನ್ನುತ್ತ ಹೊರಗೆ ಬಂದಳು. ಮಗುವು ಆಳುಮಗನ ಕಡೆಗೆ ಕೈಮಾಡಿ ಅಮ್ಮನನ್ನು ಅವಚಿಕೊಂಡು ಅಳತೊಡಗಿತು. ತಾಯಿಯು ನಕ್ಕು ಅಲ್ಲೊ ಹುಚ್ಚಪ್ಪಾ ಹುಲಿ ಎಲ್ಲಿದೆ? ಅವನು ನಮ್ಮ ಆಳುಮಗ ಹರಿ. ಇಂದು ಮೊಹರಮ್ಮದ ಹಬ್ಬ ಹುಲಿಯ ಮುಖವಾಡವನ್ನು ಹಾಕಿಕೊಂಡು ಕುಣಿದು ನಾಲ್ಕು ದುಡ್ಡು ತಕ್ಕೊಂಡು ಹೋಗಲು ಬಂದಿದ್ದಾನೆ.” ಎಂದು ಪರಿಪರಿಯಿಂದ ಸಮಾಧಾನಪಡಿಸಿದಳು. ಆದರೂ ಮಗುವು ಅಳುವುದನ್ನು ಬಿಡಲಿಲ್ಲ. ಅದಕ್ಕೆ ತಾಯಿಯ ಮಾತಿನಲ್ಲಿ ವಿಶ್ವಾಸವುಂಟಾಗಲಿಲ್ಲ. ಕೊನೆಗೆ ತಾಯಿಯು “ಹರಿ, ನಿನ್ನ ಆ ಮುಖವಾಡವನ್ನು ತೆಗೆಯಪ್ಪಾ, ಕೂಸು ನೋಡಿ ಮನಗಾಣಲಿ. ಅದಕ್ಕೆ ನನ್ನ ಮಾತು ನಿಜವೆನ್ನಿಸುವದಿಲ್ಲ” ಎಂದಳು.

ಹರಿಯು ಮುಖವಾಡವನ್ನು ತೆಗೆದು ನಗುತ್ತ ಸಣ್ಣರಾಯರು ಈ ಸಾರೆ ಎರಡು ರೂಪಾಯಿ ಇನಾಮು ಕೊಡಬೇಕು ಎಂದನು.

ಮಗುವು ತಮ್ಮ ಆಳುಮಗ ಹರಿಯನ್ನೂ ಆತನ ಕೈಯೊಳಗಿನ ಮುಖವಾಡವನ್ನೂ ನೋಡಿತು. ಆಗ ಅದಕ್ಕೆ ತಾಯಿಯ ಮಾತಿನಲ್ಲಿ ವಿಶ್ವಾಸವುಂಟಾಯಿತು. ಆ ಬಳಿಕ ಹರಿಯು ಮುಖವಾಡವನ್ನು ಹಾಕಿಕೊಂಡನು. ಆದರೂ ಅದಕ್ಕೆ ಅಂಜಿಕೆಯೆನಿಸಲಿಲ್ಲ. ಹರಿಯಂಥ ಹಲವು ಹುಲಿಗಳನ್ನು ನೋಡಿದರೂ ಅದಕ್ಕೆ ಆನಂದವೆನಿಸಿತೇ ಹೊರತು ಅಂಜಿಕೆಬರಲಿಲ್ಲ.

ಸಚ್ಚಿದಾನಂದಸ್ವರೂಪನಾದ ನಿತ್ಯಾನಂದ ಬ್ರಹ್ಮನು ಮಾಯೆಯೆಂಬ ಮುಖವಾಡದ ಮರೆಯಲ್ಲಿ ಅಡಗಿ ಇರುವನು. ಆ ಮಾಯೆಯ ಶಕ್ತಿಗೆ ಮರುಳಾಗಿ ಅಂಜುವ ಪ್ರಾಪಂಚಿಕರು ತಮ್ಮ ಆಳುಮಗನ ಹುಲಿಯ ಮುಖವನ್ನು ನೋಡಿ ಅಳುವ ಮಗುವಿನಂತಿರುವರು. ಒಮ್ಮೆ ಮುಖವಾಡವನ್ನು ಸರಿಸಿ ಮುಂದೆ ಹೋಗಿ ಆ ಬ್ರಹ್ಮಸ್ವರೂಪವನ್ನು ನೋಡಿದ ಬಳಿಕ ಮಾಯೆಯ ಭಯವು ಅಡಗಿಹೋಗುವದು.

**ಸಾಂ|| ಹುಲಿಯ ಮುಖದವರ ಕಂಡಂಜುವ ಮಗುವಿಗೆ ।**
**ಹುಲಿಯಲ್ಲವೆಂಬುದು ತಿಳಿಯೆ ॥**
**ಹುಲಿಯ ಭೀತಿಯು ಹರಿವಂತೆ ಮಾಯೆಯ ಭೀತಿ ।**
**ಕಳೆಯುವದದನು ನೀಂ ತಿಳಿಯೆ ॥ ೧ ॥**

## ೨೮ ಸಣ್ಣ ಮನಸ್ಸು.



ಒಂದು ಊರಲ್ಲಿ ಒಬ್ಬ ರಾಜನಿದ್ದನು. ಅವನಿಗೊಬ್ಬಳು ಮಗಳಿದ್ದಳು. ಸುಂದರವಾದ ಅವಯುವಸನ್ನಿವೇಶ, ಸುಸ್ವರೂಪ, ಮನೋಹರವಾದ ಗುಣಗಳು ಇವೆಲ್ಲಾ ಅವಳಲ್ಲಿದ್ದವು. ಆದರೆ ಅಹಂಕಾರಮಿಶ್ರವಾದ ಹಟವೊಂದು ಅವಳ ಸದ್ಗುಣಸುರೂಪಗಳ ಹಿಂದೆ ಬೆಳಕಿನ ಹಿಂದಿನ ಕತ್ತಲೆಯಂತೆ ವಾಸವಾಗಿದ್ದಿತು. ತಾನೇ ಸುಂದರಿ, ತನ್ನ ತಂದೆಯೇ ಶ್ರೀಮಂತನು. ತಮಗೆ ಸರಿಯಾದ ಸಂಬಂಧವು ಜಗತ್ತಿನಲ್ಲಿ ಇರಲಾರದು ಎಂಬ ಕಲ್ಪನೆಯೊಂದು ಅವಳ ಮನಸ್ಸಿನಲ್ಲಿ ಬಾಲ್ಯದಲ್ಲಿಯೇ ಹುಟ್ಟಿಬಿಟ್ಟಿತು. ಅವಳು ತಾನು ಯಾರನ್ನೂ ಮದುವೆಮಾಡಿಕೊಳ್ಳೆನೆಂದೂ ತನ್ನ ಸುಂದರವಾದ ಮುಖವನ್ನು ನೋಡಲು ಅರ್ಹರಾದ ಪುರುಷರೇ ಇಲ್ಲನೆಂದೂ ನಿರ್ಣಯಿಸಿಕೊಂಡಳು. ಅವಳು ಅರಮನೆಯ ಅಂತಃಪುರವನ್ನು ಬಿಟ್ಟು ಹೊರಗೆ ಬರಲಿಲ್ಲ.

ಮಗಳು ವಿವಾಹಕ್ಕೆ ತಕ್ಕವಳಾದುದನ್ನು ನೋಡಿ ಅರಸನು ವರಾನ್ವೇಷಣಕ್ಕೆ ಯತ್ನಿಸಿದನು. ತನ್ನ ಯೋಗ್ಯತೆಗೆ ಅನುರೂಪರಾದ ಹಲವರೊಡನೆ ಪತ್ರವ್ಯವಹಾರ ಪ್ರತ್ಯಕ್ಷ ಮಾತುಕಥೆಗಳಿಂದ ವಿವಾಹವನ್ನು ಹೊಂದಿಸಿಕೊಳ್ಳಲು ಯತ್ನಿಸಿದನು. ಈ ಸಂಗತಿಯು ಅಂತಃಪುರದ ದಾಸಿಯರ ಮುಖದಿಂದ ಆತನ ಮಗಳಿಗೆ ತಿಳಿಯಿತು ಅವಳು ಒಂದು ದಿನ ತನ್ನ ತಂದೆಯನ್ನು ಕರೆದು ತನ್ನ ಮನಸ್ಸಿನಲ್ಲಿ ಈ ಜನ್ಮದಲ್ಲಿ ಮದುವೆ ಮಾಡಿಕೊಳ್ಳುವ ವಿಚಾರವಿಲ್ಲನೆಂದೂ ತನ್ನ ಸೌಂದರ್ಯದ ಸುಖವನ್ನು ಅನುಭವಿಸಲು ಅರ್ಹನಾದ ಪುರುಷನೇ ಈ ಜಗತ್ತಿನಲ್ಲಿಲ್ಲವೆಂದೂ ದರ್ಪದಿಂದ ನುಡಿದು ನೀನು ನನ್ನ ಸಮ್ಮತಿಯಿಲ್ಲದೆ ಮದುವೆಯ ಸಿದ್ಧತೆಯನ್ನು ಮಾಡಿದರೆ ತಾನು ಅಂದೇ ಪ್ರಾಣಬಿಡುವೆನೆಂದೂ ನುಡಿದುಬಿಟ್ಟಳು.

ಅರಸನು ನಿರುಪಾಯನಾದನು. ಒಬ್ಬಳೇ ಪ್ರೀತಿಯ ಮಗಳ ಮನಸ್ಸಿನ ವಿರುದ್ಧವಾಗಿ ನಡೆಯುವದು ಅವನಿಗೆ ಬಹು ಕಷ್ಟವೆನಿಸಿತು. ಮೇಲಾಗಿ ಮಗಳಿಗೆ ಮದುವೆಯನ್ನು ಮಾಡಬೇಕೆಂಬ ಆತನ ವಿಚಾರದಲ್ಲಿ ತನ್ನ ಸ್ವಂತಸುಖದ ವಿಚಾರಕ್ಕಿಂತಲೂ ಮಗಳ ಭವಿಷ್ಯದ ಸುಖದ ಭಾವನೆಯೇ ಪ್ರಾಮುಖ್ಯವಾಗಿದ್ದುದರಿಂದ ಮಗಳಿಗೆ ಬೇಡಾಗಿರುವ ಮದುವೆಯನ್ನು ಬಲಾತ್ಕಾರದಿಂದ ಮಾಡಲು ಯತ್ನಿಸಿ ಅವಳನ್ನೇಕೆ ಕಷ್ಟದಲ್ಲಿ ಹಾಕಬೇಕೆಂದು ಅವನು ಯೋಚಿಸಿದನು. ಮತ್ತು ಏನಾದರೊಂದು ಉಪಾಯದಿಂದ ಅವಳ ಮನಸ್ಸನ್ನು ತಿರುಗಿಸಬೇಕೆಂದು ಅವನು ನಿಶ್ಚಯಿಸಿದನು. ಆದರೆ ಅದು ಸುಲಭವಾಗಿರಲಿಲ್ಲ. ಯಾಕಂದರೆ ಮಗಳು ಪುರುಷರ ಮುಖವನ್ನೇ ನೋಡುತ್ತಿರಲಿಲ್ಲ; ಅಂತಃಪುರದಿಂದ ಹೊರಗೆ ಬರುತ್ತಿರಲಿಲ್ಲ.

ಮುಂದೆ ಕೆಲವು ದಿನಗಳ ತರುವಾಯ ಅರಮನೆಗೆ ಒಬ್ಬ ವೃದ್ಧನಾದ ಸನ್ಯಾಸಿಯು ಒಂದನು. ಅರಸನು ಆತನನ್ನು ಸತ್ಕರಿಸಿ ಆಗ್ರಹದಿಂದ ನಾಲ್ಕು ದಿನ ತನ್ನ ಅರಮನೆಯಲ್ಲಿ ಇಳಿಸಿಕೊಂಡನು. ಒಂದು ದಿನ ಅರಸನು ಆ ಸನ್ಯಾಸಿಯ ಒಳಿಗೆ ಹೋಗಿ ತನ್ನ ಮಗಳ ಮದುವೆಯ ವಿಚಾರಗಳನ್ನೆಲ್ಲ ತಿಳಿಸಿ ಏನಾದರೊಂದು ಉಪಾಯದಿಂದ ಅವಳ ಮನಸ್ಸನ್ನು ತಿರುಗಿಸಬೇಕೆಂದು ಬೇಡಿಕೊಂಡನು. ಸನ್ಯಾಸಿಯು ಅರಸನ ಅಭಿಪ್ರಾಯವನ್ನು ಒಪ್ಪಿಕೊಂಡನು.

ಸನ್ಯಾಸಿಯ ಮನಸ್ಸನ್ನು ಒಲಿಸುವದು ಹೆಚ್ಚು ಕಷ್ಟವಾಗಿರದಿದ್ದರೂ ತನ್ನ ಮಗಳನ್ನು ಆತನ ಒಳಿಗೆ ಕಳುಹಿಸುವದು ಅಷ್ಟು ಸುಲಭವಾಗಿರಲಿಲ್ಲ. ಅವಳು ಪುರುಷರ ಮುಖವನ್ನೇ ನೋಡೆನೆಂಬ ಹಟವನ್ನು ಅಕ್ಷರಶಃ ಅನುಸರಿಸತಕ್ಕವಳು. ತಂದೆಯ ಮೇಲೆಯೂ ಅವಳಿಗೆ ವಿಶ್ವಾಸ ಕಡಿಮೆ. ಅವನು ಏನು ಮೋಸಮಾಡಿರುವನೋ ಸನ್ಯಾಸಿಯ ಹೆಸರು ಹೇಳಿ ತನ್ನ ಸುಂದರವಾದ ಮುಖವನ್ನು ಅಂತಃಪುರದಿಂದ ಹೊರಗೆ ತರಲು ಯತ್ನಿಸುವನೇನೊ ಎಂದು ಅವಳು ಭಾವಿಸಿದಳು. ತಾಯಿಯು ಮಗಳಿಗೆ ಪರಿಪರಿಯಿಂದ ಉಪದೇಶಮಾಡಿ ನೋಡಿದಳು. ತಂದೆತಾಯಿಗಳೂ ದಾಸಿಯರೂ ಒಂದಾಗಿ ಬಹು ಪರಿಯಿಂದ ಪ್ರಯತ್ನಮಾಡಿದ ತರುವಾಯ ಪ್ರಾರಬ್ಧವಶದಿಂದಲೇ ಅವಳು ಸನ್ಯಾಸಿಯ ಒಳಿಗೆ ಬರಲು ಸಮ್ಮತಿಸಿದಳು.

ಅರಸನ ಮಗಳಿಗೂ ಸನ್ಯಾಸಿಗೂ ಈ ರೀತಿ ಸಂಭಾಷಣೆ ನಡೆಯಿತು.

ಸನ್ಯಾಸಿ:—ತಂಗೀ, ನಿನಗೆ ವಯಸ್ಸು ಎಷ್ಟು.

ಅರಸನ ಮಗಳು:—ಇಪ್ಪತ್ತು ವರುಷಗಳಾಗಿರಬಹುದು.

ಸನ್ಯಾಸಿ:—ನಿನಗೆ ಮದುವೆಯಾಗಿದೆಯೋ?

ಅರಸನ ಮಗಳು ಎದ್ದು ನಿಂತಳು. ಒಳಿಯಲ್ಲಿರುವ ತಂದೆತಾಯಿಗಳ ಮುಖವನ್ನು ಬಿರುಗಣ್ಣಿನಿಂದ ನೋಡುತ್ತ "ಇದಕ್ಕಾಗಿಯೇ ನನ್ನನ್ನು ಇಷ್ಟು ಆಗ್ರಹಪಡಿಸಿ ಇಲ್ಲಿಗೆ ಕರೆದುತಂದಿರಾ?" ಎನ್ನುತ್ತ ಹೊರಟಳು.

ಅರಸನು ತಂಗೀ, ಕೋಪಮಾಡಬೇಡ. ಮಹಾತ್ಮರು ಹೇಳುವದನ್ನೆಲ್ಲ ಕೇಳಿ ತಿಳಿದುಕೋ. ಆಮೇಲೆ ನಿನ್ನ ಮನಸ್ಸಿನಲ್ಲಿದ್ದಂತೆ ಮಾಡು. ತಿಳಿದವರು ಹೇಳುವ ಮಾತನ್ನು ಹೀಗೆ ಅಲಕ್ಷ ಮಾಡಬಾರದು. ಅವರೇನು ನಿನಗೆ ಹೂಮಾಲೆಯನ್ನು ಹಾಕಲು ಬಂದರೇನು? ಅವರು ನಿನ್ನನ್ನು ಬಲಾತ್ಕರಿಸುವರೇನು? ಅಂದಬಳಿಕ ನಿನಗೆ ಕೋಪವೇತಕ್ಕೆ? ದುಃಖವೇತಕ್ಕೆ? ನಿನ್ನ ಹಟವಾದರೂ ಯಾಕೆ ಬೇಕು? ನಿನ್ನ ಹಿತಚಿಂತಕರಾದ ನಾವು ಹೇಳುವದನ್ನು ಶಾಂತಮನಸ್ಸಿನಿಂದ ವಿಚಾರಮಾಡು. ನಾವು ಕೇಳುವ ಪ್ರಶ್ನೆಗಳಿಗೆ ಸಮರ್ಪಕ ಉತ್ತರವನ್ನು ಕೊಡು.

ಅರಸನ ಮಗಳು ಕುಳಿತುಕೊಂಡಳು.

ಸನ್ಯಾಸಿ:—ತಂಗೀ, ಕೋಪಿಸಬೇಡ. ನಾನು ನಿನಗೆ ಪರಪುರುಷನಾದರೂ ನಿನ್ನ ಶತ್ರುವಲ್ಲ. ಅಕಲ್ಯಾಣವನ್ನು ಚಿಂತಿಸಿಲ್ಲ. ನಿನಗೆ ಮದುವೆ ಬೇಡೆನಿಸುವದೇಕೆ?

ಅರಸನ ಮಗಳು:—ಸ್ವಾಮೀ, ತಾವು ಸನ್ಯಾಸಿಗಳು ತಮಗೆ ನಾನೇನು ಹೇಳಬೇಕಾಗಿದೆ? ಈ ಕಷ್ಟಮಯವಾದ ಸಂಸಾರದ ಹೊರೆಯು ನನಗೆ ಬೇಡವಾಗಿದೆ. ಮತ್ತು ನನ್ನ ಸೌಂದರ್ಯಕ್ಕೂ ಯೋಗ್ಯತೆಗೂ ಅನುರೂಪನಾದ ಪುರುಷನು ದುರ್ಲಭನು. ಆದುದರಿಂದ ಇಷ್ಟೆಲ್ಲ ಗೊಂದಲವು ಯಾಕೆಬೇಕೆಂದು ನಾನು ಮದುವೆಯ ವಿಚಾರವನ್ನೇ ಬಿಟ್ಟುಬಿಟ್ಟಿರುವೆನು.

ಸನ್ಯಾಸಿಯು ಕೊಳ್ಳೆಂದು ನಕ್ಕುಬಿಟ್ಟನು. ಅವನು ಅವಳ ಅಂತರಂಗದ ಅಹಂಕಾರ ಮೂಲಕವಾದ ಹುಚ್ಚು ಹಟದ ಭಾವನೆಯನ್ನು ಗುರುತಿಸಿದನು. ಬಳಿಕ "ತಂಗೀ, ನೀನು ಮಲ್ಲಿಗೆಯ ಹೂವನ್ನು ನೋಡಿರುವೆಯಾ?"

ಅ. ಮ.:—ನೋಡಿದ್ದೇನೆ.

ಸನ್ಯಾಸಿ:—ಅದು ಅರಳಿದ ಬಳಿಕ ನಾಲ್ಕೂ ಕಡೆಗೆ ಪಸರಿಸುತ್ತಿರುವ ಸುವಾಸನೆಯು ಎಲ್ಲಿಂದ ಬರುವದು?

ಅ. ಮ.:—ಆ ಸುವಾಸನೆಯು ಮೊದಲೇ ಅದರಲ್ಲಿ ತುಂಬಿಕೊಂಡಿರುವದು. ಹೂವು ಅರಳಿತೆಂದರೆ ಒಳಗೆ ಗುಪ್ತವಾಗಿದ್ದ ವಾಸನೆಯು ಹೊರಗೆ ಹಬ್ಬುವದು.

ಸನ್ಯಾಸಿ:—ಮಲ್ಲಿಗೆಯ ಹೂವು ತನ್ನ ಸುವಾಸನೆಯನ್ನು ಪರರ ಸಂತೋಷಕ್ಕಾಗಿ ಹೊರಗೆ ಬೀರುತ್ತಿರುವದೆಂದ ಹಾಗಾಯಿತು. ಇನ್ನೊಂದು ಮಾತು ಹೇಳು. ಮಲ್ಲಿಗೆಯ ಮೊಗ್ಗೆಯು ತಾನು ವಿಕಾಸವಾಗಿ ತನ್ನ ಸುವಾಸನೆಯನ್ನು ಹೊರಗೆ ಬೀರುವದಿಲ್ಲವೆಂದು ಕ್ಷಣಹೊತ್ತು ತಿಳಿ. ಅದರಿಂದ ಏನು ಪರಿಣಾಮವಾಗುತ್ತಿತ್ತು?

ಅ. ಮ. :—ಮಲ್ಲಿಗೆಗೆ ಸುವಾಸನೆಯಿರುವದೆಂಬದು ಜಗತ್ತಿನ ನಿದರ್ಶನಕ್ಕೇ ಬರುತ್ತಿರಲಿಲ್ಲ.

ಸನ್ಯಾಸಿ:—ಬಹಳ ಚನ್ನಾಗಿ ಹೇಳಿದೆಯಮ್ಮಾ! ಮಲ್ಲಿಗೆಯ ಸುವಾಸನೆಯು ಪರರ ಸುಖಕ್ಕಾಗಿಯೇ ಇರುವದೆಂದ ಹಾಗಾಯಿತು. ದೇವರು ಅದಕ್ಕೆ ಆ ಸುವಾಸನೆಯನ್ನು ಸ್ವಂತ ಅನುಭವಕ್ಕಾಗಿ ಕೊಟ್ಟಿಲ್ಲ. ಮಲ್ಲಿಗೆಯು ತನ್ನ ಸುವಾಸನೆಯಿಂದ ಜನರನ್ನು ಸಂತೋಷಪಡಿಸದೆ ಇದ್ದರೆ ಅದರ ಜನ್ಮದಿಂದ ಫಲವೇನು? ದೇವರು ಅದಕ್ಕೆ ದಯಪಾಲಿಸಿದ ಸುವಾಸನೆಯ ಪ್ರಯೋಜನವೇನಾದ ಹಾಗಾಯಿತು? ಜಗತ್ತಿನಲ್ಲಿ ತ್ಯಾಗದಲ್ಲಿ ಸುಖವಿರುವದೇ ಹೊರತು ಸ್ವಾರ್ಥದಲ್ಲಿ ಸುಖವಿಲ್ಲ. ಪರರನ್ನು ಸಂತೋಷಪಡಿಸುವದಕ್ಕಾಗಿ ನಾವು ತುಸು ತೊಂದರೆಯನ್ನು ಅನುಭವಿಸಬೇಕಾಗುವದು. ಮಲ್ಲಿಗೆಯು

ಸುವಾಸನೆಯಂತೆ ನೀನು ಬಹು ಸುಂದರಿಯೆಂಬದನ್ನು ನಾನು ನೋಡುತ್ತೇನೆ. ಆದರೆ ಆ ನಿನ್ನ ಸೌಂದರ್ಯದಿಂದ ನಿನಗೆ ಏನು ಸುಖವಿದೆ? ಕನ್ನಡಿಯ ಮುಂದೆ ನಿಂತು ನಿನ್ನ ಮುಖವನ್ನು ನೀನೇ ನೋಡಿಕೊಂಡು "ನಾನು ಸುಂದರಿ" ಯೆಂದು ಹೇಳಿಕೊಂಡರೆ ಅದರಿಂದ ನಿನಗೆ ಏನು ಪ್ರಯೋಜನವಾದ ಹಾಗಾಯಿತು. ಆ ನಿನ್ನ ಸೌಂದರ್ಯದಿಂದ ನಿಜವಾಗಿ ಎರಡನೆಯವರಿಗೆ ಸುಖವಾಗುವದು. ಸ್ತ್ರೀಯರ ಸೌಂದರ್ಯವೂ ತಾರುಣ್ಯವೂ ಅವರ ಸ್ವಂತ ಸುಖಕ್ಕಾಗಿ ದೇವರಿಂದ ಕೊಡಲ್ಪಟ್ಟಿಲ್ಲ. ನಿನ್ನ ಮೂಗು ಡೊಂಕಾಗಿದ್ದರೆ ಅದರಿಂದ ನಿನಗೆ ಎಷ್ಟು ಸುಖವಾಗುವದೋ ಅಷ್ಟೇ ಸುಖವು ಮುಖದ ಸೌಂದರ್ಯವನ್ನು ಹೆಚ್ಚಿಸುವಂತೆ ಮನೋಹರವಾಗಿದ್ದಾಗಲೂ ಆಗುವದು. ನೀನು ಕರಿಯ ಕುರೂಪಿಯಾದರೂ ಬಂಗಾರದ ವರ್ಣದ ಸುಂದರಿಯಾದರೂ ಅದರಿಂದ ನಿನಗೆ ಸುಖವೂ ಇಲ್ಲ; ದುಃಖವೂ ಇಲ್ಲ. ನೀನು ಕುರೂಪಿಯಾಗಿದ್ದರೆ ಅದರಿಂದ ಜನರಿಗೆ ಅಸಹ್ಯವೆನಿಸುವದು. ಸುರೂಪಿಯಾಗಿದ್ದರೆ ಪರರಿಗೆ ನಿನ್ನನ್ನು ನೋಡಿ ಸಂತೋಷವಾಗುವದು. ಇಷ್ಟೇ ನಿನ್ನ ರೂಪದಿಂದ ನಿನಗೆ ದೊರೆಯುವ ಪ್ರತಿ ಫಲಗಳು. ನಿನ್ನ ಸುಂದರವಾದ ರೂಪ, ನಿನ್ನ ಮನೋಹರವಾದ ಗುಣ ನಿನ್ನ ಸಿರಿಸಂಪತ್ತು ಇವುಗಳಿಂದ ನೀನು ಎರಡನೆಯವರನ್ನು ಸಂತೋಷಪಡಿಸಿದರೆ, ಸಂಕಟದಲ್ಲಿರುವವರಿಗೆ ಸಹಾಯಮಾಡಿದ್ದರೆ, ಮಾತ್ರ ದೇವರು ನಿನಗೆ ದಯಪಾಲಿಸಿರುವ ಆ ಅಮೌಲ್ಯ ವಸ್ತುಗಳ ಸದುಪಯೋಗವಾದ ಹಾಗಾಗುವದು. ಮಲ್ಲಿಗೆಯ ಮೊಗ್ಗೆಯು ಇಂದು ಅರಳಿ ನಾಳೆಬಿದ್ದು ಹೋಗುವಂತೆ ನಿನ್ನ ಸೌಂದರ್ಯವೂ ತಾರುಣ್ಯವೂ ಇಂದಿನಂತೆ ನಾಳೆ ಉಳಿಯವು. ದಿನಕ್ಕೊಂದು ರೀತಿ ಕುಂದುತ್ತ ಹೋಗಿ ಕೊನೆಗೆ ಒಂದು ದಿನ ಶರೀರವೇ ಬಿದ್ದು ಹೋಗುವದು. ದೇವರು ನಿನಗೆ ದಯಪಾಲಿಸಿರುವ ಈ ಸುಂದರವಾದ ಶರೀರವನ್ನು ಅಂತಃಪುರದಲ್ಲಿ ಬೈತಿಟ್ಟು ಒಂದುದಿನ ಸತ್ತುಹೋದರೆ ನೀನು ಹುಟ್ಟಿದ್ದರ ಪ್ರಯೋಜನವು ಪರರಿಗಿಲ್ಲದಿದ್ದರೆ ನಿನ್ನ ಮಟ್ಟಿಗೇ ಆದರೂ ಏನಾದ ಹಾಗಾಯಿತು?

ಅರಸನ ಮಗಳು ಸನ್ಯಾಸಿಯ ಮಾತುಗಳನ್ನು ಶಾಂತಚಿತ್ತದಿಂದ ಕೇಳಿದಳು. ಅವಳ ಮನಸ್ಸಿನ ಭ್ರಾಂತಿಯು ಮೆಲ್ಲಗೆ ಒಯಲಾಯಿತು.

ಸನ್ಯಾಸಿ:—ಜಗತ್ತಿನಲ್ಲಿ ನಿನ್ನಂತೆಯೇ ಸಣ್ಣ ಮನಸ್ಸಿನ ಜನರು ಬಹು ಸಂಖ್ಯಾಕರಾಗಿದ್ದಾರೆ. ಅವರಿಗೆ ತಮ್ಮ ಜನ್ಮಸಾಫಲ್ಯಮಾರ್ಗದ ಕಲ್ಪನೆಯೇ ಇರುವದಿಲ್ಲ. ನಾಲ್ಕು ದಿನ ಉಂಡುತಿಂದು ಕಾಲಕಳೆದರೆ ತೀರಿತೆಂದು ಅವರು ಭಾವಿಸುವರು. ಸಿರಿವಂತರಲ್ಲಿ ಈ ತರದ ಕಲ್ಪನೆ ಬಹಳ. ಅವರಿಗೆ ತಮ್ಮ ಸಂಪತ್ತಿನ ಉಪಯೋಗವೇನೆಂಬದು ತಿಳಿದಿರುವದೇ ಇಲ್ಲ. ಹೊಟ್ಟೆಬಟ್ಟೆಗಳನ್ನೂ ಸಾಕಷ್ಟು ಉಪಭೋಗಿಸದೆ ಹಣಕೂಡಿಸುವ ಕೃಪಣರೂ ಜಗತ್ತಿನಲ್ಲಿ ಹಲವರಿದ್ದಾರೆ. ತಂಗೀ, ನೀನು ಇಂದಿನವರೆಗೆ ವಿಚಾರವಿಲ್ಲದೆ ಅಹಂಕಾರಮೂಲಕವಾಗಿ ಹಟಮಾಡಿದಂತೆ ಇನ್ನುಮುಂದೆ ಮಾಡಲಾರೆನೆಂದು ನಾನು

ನಿಶ್ಚಯವಾಗಿ ಹೇಳುತ್ತೇನೆ. ದೇವರು ನಮಗೆ ದಯಪಾಲಿಸಿರುವ ರೂಪ, ಗುಣ, ಸಂಪತ್ತು, ಬುದ್ಧಿ, ವಿದ್ಯೆ ಮುಂತಾದ ನಮ್ಮ ಸರ್ವಸ್ವವನ್ನೂ ಪರರ ಸುಖದ ಸಲುವಾಗಿಯೇ ದಯಪಾಲಿಸಿರುವನೆಂದು ತಿಳಿಯಬೇಕಲ್ಲದೆ ಅವುಗಳನ್ನು ಮುಚ್ಚಿಟ್ಟು ಹಣದ ರಾಶಿಯನ್ನು ಕಾಯಲು ಕುಳಿತ ಸರ್ಪದಂತೆ ದುರ್ಗುಣವನ್ನು ವ್ಯಕ್ತಪಡಿಸಕೂಡದು. ನಮಗೆ ದೇವರು ಕೊಟ್ಟಿರುವ ಸಕಲ ಐಶ್ವರ್ಯಗಳನ್ನೂ ಸ್ಥಾನ ಕಾಲ ಪಾತ್ರಗಳನ್ನು ಅನುಲಕ್ಷಿಸಿ ಪರರಲ್ಲಿ ಅರ್ಪಿಸಿ ಅವರನ್ನು ಆನಂದಪಡಿಸಿ ಅವರು ಅನುಭವಿಸುತ್ತಿರುವ ಆನಂದದಿಂದಲೇ ನಾವು ಸುಖಿಗಳಾಗಬೇಕು. ಒಬ್ಬ ಪಂಡಿತನು ಸಕಲ ಶಾಸ್ತ್ರಗಳನ್ನೂ ಅಭ್ಯಾಸ ಮಾಡಿ ಜಗನ್ಮಾನ್ಯನಾಗಿದ್ದನೆಂದು ತಿಳಿ. ಅವನು ಆ ತನ್ನ ವಿದ್ಯೆಯನ್ನು ಎರಡನೆಯವರಿಗೆ ಉಪದೇಶಿಸದೆ ಹಾಗೆಯೇ ಸತ್ತುಹೋದರೆ ಅವನಿಗೆ ಆ ವಿದ್ಯೆಯಿಂದ ಏನು ಪ್ರಯೋಜನವಾದ ಹಾಗಾಗುವದು? ಒಬ್ಬನಲ್ಲಿ ಸತ್ತವರನ್ನು ಬದುಕಿಸುವಷ್ಟು ಅಮೌಲ್ಯವಾದ ಔಷಧವಿದೆಯೆಂದು ತಿಳಿ. ಅದನ್ನು ಅವನು ಯಾರಿಗೂ ಕೊಡದೆ ಇದ್ದರೆ ಆ ಔಷಧಿಯು ಇದ್ದರೇನು? ಇಲ್ಲದಿದ್ದರೇನು? ಅದರ ಗುಟ್ಟನ್ನು ಯಾರಿಗೂ ಹೇಳದೆ ಇರುವದರಿಂದ ತಾನೇ ಸತ್ತರೂ ಆ ಔಷಧವನ್ನು ಇನ್ನೊಬ್ಬನು ಉಪಯೋಗಿಸಲು ಬಾರದಂತಿರುವದರಿಂದ ಅದರಿಂದ ಪ್ರಯೋಜವೇನಾಗುವದು?

ತಂಗೀ, ಜಗತ್ತಿನಲ್ಲಿ ಇನ್ನೂ ಇಂಥ ಅನೇಕ ಸಂಗತಿಗಳಿರುವವು. ಅವುಗಳನ್ನು ಸಕಾಲದಲ್ಲಿ ಸತ್ಪಾತ್ರದಲ್ಲಿ ಅರ್ಪಿಸದೆ ಇದ್ದರೆ ಅವುಗಳ ಅಸ್ತಿತ್ವವೇ ನಿದರ್ಶನಕ್ಕೆ ಬರುತ್ತಿರುವದಿಲ್ಲ. ಸ್ವಹಿತವೂ ಪರಹಿತವೂ ಸಾಧಿಸದೆ ಇರುವಂಥ ಪ್ರಾಣಿಯ ಜನ್ಮವು ಭೂಮಿಗೆ ಭಾರವಲ್ಲದೆ ಮತ್ತೇನು? ಅದುದರಿಂದ ತಂಗೀ, ನೀನು ಯೋಗ್ಯನಾದ ವರನನ್ನು ವರಿಸಿ ಸಂಸಾರದಲ್ಲಿ ಸುಖಿಯಾಗಿ ಬಾಳಿ, ನಿನ್ನ ಸದ್ಗುಣಸ್ವರೂಪಗಳಿಂದ ಪತಿಯನ್ನು ಆನಂದಪಡಿಸುವದು ಅವಶ್ಯವು.

ಸನ್ಯಾಸಿಯ ಉಪದೇಶದಿಂದ ತಿಳುವಳಿಕೆಯುಂಟಾದ ಅರಸನ ಮಗಳು ತನ್ನ ತಪ್ಪನ್ನು ಒಪ್ಪಿಕೊಂಡಳು. ಅರಸನು ಯೋಗ್ಯವರನಿಗೆ ಕೊಟ್ಟು ವ.ಗಳ ಮದುವೆ ಮಾಡಿದನು. ಸರ್ವರೂ ಸುಖಿಗಳಾದರು.

ಸಾಂ|| ತಾನೆ ಸುಂದರಿ ತಾನೆ ಸಂಪನ್ನನೆಂದೆಂಬ ।
ತಾನೆ ಸರ್ವರೊಳಧಿಕನೆಂಬ ॥
ಜ್ಞಾನಹೀನರ ಹೀನಭಾವನೆಯನೊಪ್ಪುವರೆ ।
ಜ್ಞಾನಿಗಳಾದ ಸಜ್ಜನರು ॥ ೧ ॥

---

## ೩೦. ಏಳು ಕೊಪ್ಪರಿಗೆಗಳು.





ದಾರಿಯ ಮಗ್ಗಲಲ್ಲಿರುವ ಒಂದು ಮರದ ಅಡಿಯಲ್ಲಿ ಒಬ್ಬ ಯಕ್ಷನು ವಾಸವಾಗಿದ್ದನು. ಒಂದು ದಿನ ನೆರೆಯೂರಿಗೆ ಹೋಗಿ ಬರುತ್ತಿದ್ದ ನಾವಲಿಗನೊಬ್ಬನು ಆತನ ಬಳಿಗೆ ಹೋಗಿ ನಮಸ್ಕಾರ ಮಾಡಿ ಕುಳಿತುಕೊಂಡನು. ಮಧ್ಯಾಹ್ನದ ಬಿಸಲಿನಿಂದ ಬೆಂದು ಬೆಂಡಾಗಿ ಬಳಲುತ್ತಿದ್ದ ನಾವಲಿಗನು ಯಕ್ಷನನ್ನು ಕುರಿತು, "ಮಹಾರಾಯಾ, ಈ ಸಂಸಾರವು ಸಾಕಾಗಿದೆ. ಬಿಸಿಲು ಬೆಂಕಿಗಳನ್ನು ಲಕ್ಷಿಸದೆ, ಹಸಿವೆನೀರಡಿಕೆಗಳನ್ನು ಗಣಿಸದೆ ಹಳ್ಳಿ ಹಳ್ಳಿ ಮನೆಮನೆಗಳನ್ನು ತಿರುತಿರುಗಿ ಬೇಸತ್ತೆನು. ಇಷ್ಟು ಕಷ್ಟಪಟ್ಟರೂ ಅರಸನು ಕೊಡುತ್ತಿರುವ ವರ್ಷಾಶನದಿಂದಲೂ ಹೊಟ್ಟೆತುಂಬ ರೊಟ್ಟಿ, ಮೈತುಂಬ ಬಟ್ಟೆ ದೊರೆಯುದಾಗಿದೆ ದಯಮಾಡಿ ಈ ದಾರಿದ್ರ್ಯತಾಪವನ್ನು ಕಳೆಯಬಾರದೇ" ಎಂದು ಬೇಡಿಕೊಂಡನು. ಆಗ ಯಕ್ಷನು—"ತಮ್ಮಾ, ದೇವರು ನಿನ್ನನ್ನು ದಯಾದೃಷ್ಟಿಯಿಂದ ನೋಡಿರುವನು. ನಾನು ಈ ಹೊತ್ತು ಮುಂಜಾನೆ ಎದ್ದಕೂಡಲೆ—ಈ ಹೊತ್ತು ಊಟ ಮಾಡುವ ಹೊತ್ತಿಗೆ ಸರಿಯಾಗಿ ನನ್ನ ಬಳಿಗೆ ಬಂದವನಿಗೆ ಏಳು ಕೊಪ್ಪರಿಗೆ ದ್ರವ್ಯವನ್ನು ಕೊಡಬೇಕೆಂದು ಸಂಕಲ್ಪ ಮಾಡಿಕೊಂಡಿದ್ದೆನು. ಆ ನನ್ನ ಸಂಕಲ್ಪಿತ ಸಮಯಕ್ಕೆ ಸರಿಯಾಗಿ ನೀನು ಬಂದು ನನ್ನನ್ನು ಕೇಳಿಕೊಂಡೆ. ನಡೆ. ಇನ್ನು ಚಿಂತೆಯನ್ನು ಬಿಡು. ಇಂದಿಗೆ ನಿನ್ನ ದಾರಿದ್ರ್ಯವಿಚ್ಛಿನ್ನವಾಯಿತೆಂದು ತಿಳಿ. ಈಗಾಗಲೇ ನಿನ್ನ ಮನೆಗೆ ಏಳು ಕೊಪ್ಪರಿಗೆ ದ್ರವ್ಯವು ಹೋಗಿರುವದು." ಎಂದನು.

ಯಕ್ಷನ ಮಾತುಗಳನ್ನು ಕೇಳಿ ನಾವಲಿಗನು ಆನಂದಭರಿತನಾಗಿ ಮನೆಗೆ ನಡೆದನು. ಮನೆಗೆ ಬಂದು ನೋಡುವಷ್ಟರಲ್ಲಿ ನಡುಮನೆಯಲ್ಲಿ ಏಳು ಕೊಪ್ಪರಿಗೆಗಳು ಸಾಲಾಗಿ ಇಡಲ್ಪಟ್ಟಿದ್ದವು. ನಾವಲಿಗನು ಹಸಿವೆ ನೀರಡಿಕೆಗಳನ್ನು ಮರೆತುಬಿಟ್ಟು ಒಂದೊಂದಾಗಿ ಕೊಪ್ಪರಿಗೆಗಳನ್ನು ತೆರೆದುನೋಡಿದನು. ಮೊದಲಿನ ಆರೂ ಕೊಪ್ಪರಿಗೆಗಳು ಬಂಗಾರದ ನಾಣ್ಯಗಳಿಂದ ಪೂರಾ ತುಂಬಿದ್ದವು. ಏಳನೆಯದೊಂದು ಮಾತ್ರ ಮುಕ್ಕಾಲು ಪಾಲು ತುಂಬಿದ್ದಿತು. ಆಗ ನಾವಲಿಗನು ಮನಸ್ಸಿನಲ್ಲಿ—ಆಹಾ! ಇಂದು ನಾನು ಎಷ್ಟು ಶ್ರೀಮಂತನಾದೆನು. ಮುಂಜಾನೆ ನಾನು ಯಾರ ಮುಖವನ್ನು ನೋಡಿ ಎದ್ದಿದ್ದೇನು? ಹಳ್ಳಿಗೆ ಹೊರಡುವಾಗ ಯಾರು ಇದಿರು ಬಂದಿದ್ದಾರು? ಕುಸು ದಿನಗಳಲ್ಲಿಯೇ ಈ ಮುಕ್ಕಾಲು ತುಂಬಿದ ಕೊಪ್ಪರಿಗೆಯನ್ನೂ ಪೂರಾ ತುಂಬಿಬಿಡುವೆನು; ಆ ಮೇಲೆ ಯಾರಾದರೂ ನನ್ನನ್ನು—ನೀನು ಎಷ್ಟು ಶ್ರೀಮಂತನೆಂದು ಕೇಳಿದರೆ, ನಾನು ಏಳು ಕೊಪ್ಪರಿಗೆಗಳ ಒಡೆಯನೆಂದು ಹೇಳಿಕೊಳ್ಳಬಹುದಲ್ಲವೇ? ಎಂದು ಆಲೋಚಿಸುತ್ತಿರುವಾಗ ಹೆಂಡತಿ ಬಂದು ಊಟಕ್ಕೆ ಕರೆದಳು. ನಾಗಲಿಗನು ಮಾರನೆಯ ದಿನವೇ ತನ್ನ ಮನೆಯೊಳಗಿನ ಬೆಳ್ಳಿಬಂಗಾರದ ಸಾಮಾನುಗಳನ್ನೂ ಮಿಕ್ಕ ಬೆಲೆಬಾಳುವ ಒಡವೆ

ಗಳನ್ನೂ ಮಾರಿ ಬಂಗಾರದ ನಾಣ್ಯಗಳನ್ನು ಕೊಂಡುಕೊಂಡು ಬಂದು ಏಳನೆಯ ಕೊಪ್ಪರಿಗೆಯಲ್ಲಿ ಹಾಕಿದನು. ತುಂಬಲಿಲ್ಲ. ಮತ್ತೆ ಕೆಲವು ದಿನಗಳಲ್ಲಿಯೇ ತನ್ನವೆರಡು ಹೊಲಗಳನ್ನು ಮಾರಿ ಬಂದ ಹಣದಿಂದ ನಾಣ್ಯಗಳನ್ನು ತಂದು ಕೊಪ್ಪರಿಗೆಯಲ್ಲಿ ಹಾಕಿದನು. ಆದರೂ ಅದು ತುಂಬಲಿಲ್ಲ. ನಾವಲಿಗನು ಚಿಂತೆಗೊಳಗಾದನು ಅದು ತುಂಬಿದ ಹೊರತು ಯಾವ ರೀತಿಯಿಂದಲೂ ಅವನಿಗೆ ಸಮಾಧಾನವಾಗುವಂತಿರಲಿಲ್ಲ. ಅವನು ದಿನಾಲು ಗಳಿಸಿದ್ದನ್ನೆಲ್ಲ ಹೊಟ್ಟೆಬಟ್ಟೆಗಳಿಗೂ ಸರಿಯಾಗಿ ವೆಚ್ಚಮಾಡದೆ ಆ ಕೊಪ್ಪರಿಗೆಯಲ್ಲಿ ಹಾಕತೊಡಗಿದನು. ಆದರೂ ಕೊಪ್ಪರಿಗೆಯು ತುಂಬುವ ಲಕ್ಷಣವೇನೂ ತೋರಲಿಲ್ಲ.

ಹೀಗಿರಲು ಒಂದು ದಿನ ಆತನು ಅರಸನ ಬಳಿಗೆ ಹೋಗಿ—ಮಹಾರಾಜನೇ, ನೀನು ಕೊಡುತ್ತಿರುವ ವರ್ಷಾಶನದಿಂದ ನನ್ನ ಸಂಸಾರವು ಸರಿಯಾಗಿ ನಡೆಯದಾಗಿದೆ. ದಯಮಾಡಿ ಅದನ್ನು ಹೆಚ್ಚಿಸಬೇಕೆಂದು ಬೇಡಿಕೊಂಡನು. ನಾವಲಿಗನು ಅರಸನ ವಿಶ್ವಾಸಕ್ಕೆ ಪಾತ್ರನಾದವನಾದುದರಿಂದ ಅರಸನು ಆತನ ಪ್ರಾರ್ಥನೆಯನ್ನು ನೆರವೇರಿಸಿದನು. ನಾವಲಿಗನು ಇನ್ನನೇಕ ವಿಧದಿಂದ ದುಡಿದು ಹಣ ಗಳಿಸಿ ಬಂಗಾರದ ನಾಣ್ಯಗಳನ್ನು ತಂದು ಆ ಏಳನೆಯ ಕೊಪ್ಪರಿಗೆಯನ್ನು ತುಂಬಲು ಯತ್ನಿಸಿದನು. ಆದರೂ ಅದೇನು ತುಂಬಲಿಲ್ಲ; ನಾವಲಿಗನ ಚಿಂತೆಯು ಹಿಂಗಲಿಲ್ಲ. ಅವನು ದಿನದಿನಕ್ಕೆ ಹೆಚ್ಚು ಹೆಚ್ಚಾಗಿ ಕೊರಗಿ ಸೊರಗಿ ಕೃಶನಾದನು.

ಒಂದು ದಿನ ನಾವಲಿಗನು ಅರಮನೆಗೆ ಹೋಗಿರುವಾಗ ಅರಸನು ಅವನನ್ನು ನೋಡಿ—“ಏನಯ್ಯಾ, ಈಗ ಕೆಲವು ದಿನಗಳಿಂದಲೂ ನೀನು ದಿನದಿನಕ್ಕೆ ಸೊರಗಿ ಕೃಶನಾಗುತ್ತ ನಡೆದಿರುವೆ. ನೀನಾವುದೋ ಚಿಂತೆಯಿಂದ ಬಳಲುವಂತೆ ತೋರುತ್ತಿದೆ. ನೀನೆಲ್ಲಿಯೋ ಏಳು ಕೊಪ್ಪರಿಗೆ ದ್ರವ್ಯವನ್ನು ದೊರಕಿಸಿದಂತೆ ತೋರುತ್ತಿದೆ.” ಎಂದನು.

ನಾವಲಿಗನು ಅರಸನ ಮಾತುಗಳನ್ನು ಕೇಳಿ ಬೆಚ್ಚಿಬಿದ್ದು, “ಕೈಗಳನ್ನು ಜೋಡಿಸಿ ನನ್ನ ಏಳು ಕೊಪ್ಪರಿಗೆಯ ಸಮಾಚಾರವನ್ನು ತಮಗಾರು ತಿಳಿಸಿದರು?” ಎಂದನು.

ಅರಸನು ನಕ್ಕನು. ತಮ್ಮಾ, ನನಗೆ ಇನ್ನಾರು ಹೇಳಬೇಕು? ನಿನ್ನ ದುರವಸ್ಥೆಯೇ ಎಲ್ಲವನ್ನೂ ಹೇಳುತ್ತಿದೆ. ಯಕ್ಷನು ಕೊಡುವ ಧನವನ್ನು ಸ್ವೀಕರಿಸುವವರಿಗೆ ನಿನ್ನಂಥ ದುರವಸ್ಥೆಯು ಬೇಡವೆಂದರೂ ಬರುವದು. ಆ ಧನವನ್ನು ತಿರುಗಿ ಕೊಟ್ಟುಬಿಟ್ಟರೆ ನೀನು ನಿಜವಾಗಿಯೂ ಸುಖಿಯಾಗುವೆ. ಎನ್ನಲು ಮಾರನೆಯ ದಿನವೇ ನಾವಲಿಗನು ಯಕ್ಷನ ಬಳಿಗೆ ಹೋಗಿ ಅವನ ದ್ರವ್ಯವನ್ನು ತಿರುಗಿ ಮುಟ್ಟಿಸಿ ತಾನು ಸುಖಿಯಾಗಿದ್ದನು. ಮನುಷ್ಯನ ಮನಸ್ಸಿನೊಳಗಿನ ಆಶೆಯೇ ಅವನ ದುಃಖಕ್ಕೆ ಮೂಲ ಕಾರಣವು.

**ಸಾ॥ ಏಳು ಕೊಪ್ಪರಿಗೆ ದ್ರವ್ಯವ ಪಡೆದ ನಾವಲಿಗ ।**
**ನೆಳ್ಳಷ್ಟೂ ಸುಖವ ಹೊಂದಿದನೆ ॥**
**ಕಳ್ಳಸಂದದೆ ಮನದೆ ಸೇರಿರುವ ಲೋಭವ ।**
**ಗೆಲ್ಲುವುದೆ ಸುಖಕೆ ಸಾಧನವೈ ॥ ೧ ॥**

## ೩೧ ಮಾರವಾಡಿಯ ಮನಸ್ಸು.





ಒಂದು ದಿನ ಒಬ್ಬ ಮಾರವಾಡಿಯು ಶ್ರೀರಾಮಕೃಷ್ಣ ಪರಮಹಂಸರ ಬಳಿಗೆ ಬಂದು ತಾನು ತಂದಿರುವ ಹಣ್ಣು ಹೂವುಗಳನ್ನು ಸಮರ್ಪಿಸಿ ಸಾಷ್ಟಾಂಗ ನಮಸ್ಕಾರಮಾಡಿ ದೂರ ಸರಿದು ಕುಳಿತುಕೊಂಡನು. ಸ್ವಾಮಿಯವರು ಆತನ ಮುಖಲಕ್ಷಣಗಳನ್ನು ನೋಡಿ ಇವನು ಯಾವದೋ ವಿಚಾರಕ್ಕಾಗಿ ತನ್ನ ಬಳಿಗೆ ಬಂದಿರುವನೆಂಬದನ್ನು ತಿಳಿದುಕೊಂಡು—" ಏನಯ್ಯಾ, ಇಷ್ಟು ದೂರ ಬರುವುದಕ್ಕೆ ಕಾರಣವೇನು? " ಎಂದು ಕೇಳಿದರು.

ಮಾರವಾಡಿ:—ಸ್ವಾಮೀ ನಾನು ಮೊದಲು ತುಂಬಾ ಐಶ್ವರ್ಯವಂತನಾಗಿದ್ದೆನು ಈಗ ಸರ್ವಸಂಗ ಪರಿತ್ಯಾಗಮಾಡಿ ನನ್ನ ಸಂಪತ್ತನ್ನೆಲ್ಲಾ ದಾನಧರ್ಮಗಳಿಗಾಗಿ ವೆಚ್ಚಮಾಡಿರುವೆನು. ಆದರೂ ನಾನು ಭಗವಂತನನ್ನು ಕಾಣದಿರಲು ಕಾರಣವೇನು?

ಸ್ವಾಮಿ:—ತಮ್ಮಾ, ಒಂದು ಎಣ್ಣೆಯ ಪಾತ್ರೆಯಿದೆಯೆಂದು ತಿಳಿ. ಅದರೊಳಗಿನ ಎಣ್ಣೆಯೆಲ್ಲಾ ತೀರಿದರೂ ಆ ವಾಸನೆಯು ಹಾಗೆಯೇ ಉಳಿದಿರುವದು ನಿನಗೆ ಗೊತ್ತಿರುವದಲ್ಲವೇ? ಅದರಂತೆ ನಿನ್ನ ಮನಸ್ಸಿನ ಸ್ಥಿತಿಯಾಗಿದೆ. ಆ ನಿನ್ನ ಮನಸ್ಸು ಪ್ರಪಂಚವನ್ನು ಬಿಟ್ಟಿದ್ದರೂ ಪ್ರಾಪಂಚಿಕ ಅಭಿಮಾನಗಳ ವಾಸನೆಯು ನಿನ್ನ ಮನಸ್ಸನ್ನು ಬಿಟ್ಟಿಲ್ಲ ಇದಕ್ಕೆ ಇನ್ನೂ ಒಂದು ಉದಾಹರಣೆಯನ್ನು ಹೇಳಬಹುದು. ಮಜ್ಜಿಗೆಯ ಪಾತ್ರೆಯೊಳಗಿನ ಮಜ್ಜಿಗೆಯೆಲ್ಲ ತೀರಿತೆಂದು ಅದರೊಳಗೆ ಹಾಲನ್ನು ಹಾಕಿದರೆ ಏನಾಗುವದು? ಭಗವದ್ದರ್ಶನಕ್ಕೆ ಅವಶ್ಯವಾಗಿರುವ ಏಕಾಗ್ರಚಿತ್ತವೂ ನಿರ್ಮಲವಾದ ಭಕ್ತಿಯೂ ಕೇವಲ ಹಾಲಿನಂತಿರುವವು. ಹಾಲಿಗೆ ಮಜ್ಜಿಗೆಯ ಸಂಸರ್ಗವು ಎಷ್ಟುಮಾತ್ರವೂ ಸೇರದಂತೆ ಇವುಗಳಿಗೆ ಪ್ರಾಪಂಚಿಕ ಮಾಯಾ ಮೋಹಗಳ ವಾಸನೆಯು ಎಳ್ಳಷ್ಟೂ ಒಗ್ಗದು. ಆದುದರಿಂದ ನೀನು ನಿನ್ನ ಮನಸ್ಸನ್ನು ನಿರ್ಮಲವಾಗಿಡುವದಕ್ಕೆ ಯತ್ನಿಸು. ಬಹಿರಂಗದ ತ್ಯಾಗದಿಂದ ಮನಸ್ಸು ನಿರ್ಮಲವಾಗಲಾರದು. ಹಸಿಯ ಕಟ್ಟಿಗೆಗೆ ಸಮಾನವಾದ ಮನಸ್ಸನ್ನು ಸತ್ಸಂಗವೆಂಬ ಒಲೆಯೊಳಗಿಟ್ಟು ಆ ಕಟ್ಟಿಗೆಯಲ್ಲಿರುವ ಲೋಭಮೋಹಗಳೆಂಬ ತೇವವನ್ನು ಮೊದಲು ಆರಿಸಿಕೊ; ಆಮೇಲೆ ವಿವೇಕವೆಂಬ ಅಗ್ನಿಯು ಪ್ರಜ್ವಲಿಸುವಂತೆ ಮಾಡಿದರೆ ಆ ಬೆಂಕಿಯ ಬೆಳಕಿನಲ್ಲಿ ಭಗವಂತನ ಸ್ವರೂಪಜ್ಞಾನವು ಸಹಜವಾಗಿ ಆಗುವದು.

ಮಾರವಾಡಿಯು ಸ್ವಾಮಿಯವರನ್ನು ವಂದಿಸಿ ತನ್ನ ಸ್ಥಳಕ್ಕೆ ತಿರುಗಿದನು.

**ಸಾಂ॥ ಹೊರಗಿನಾಚಾರದೆ ಸನ್ಯಾಸಿಯಾದವಗೆ ।**
**ಪರಮ ಪುರುಷನೊಲಿದಪನೆ ॥**
**ನಿರಭಿಮಾನದೆ ಸರ್ವಸಂಗವ ತೊರೆದು ನೀ ।**
**ಗುರುಪುಂಗವನ ಸಾರ್ಕೆ ಮರುಳೆ ॥ ೧ ॥**

## ೩೨ ಪ್ರಾಪಂಚಿಕ ಸಂಬಂಧಗಳು.





ಕ್ತಿಸಂಪನ್ನರಾದ ಹಿಂದೂಗಳ ಅಂತರಂಗದ ಭಕ್ತಿಗೆ ಸಂಪೂರ್ಣ ಆಶ್ರಯ ವೆನಿಸಿರುವ ಭಾಗವತ ಪುರಾಣದಲ್ಲಿ ಮನುಷ್ಯನ ಪ್ರಾಪಂಚಿಕ ಸಂಬಂಧಿಕರ ವಿಷಯವಾಗಿ ಒಂದು ಕಥೆಯಿರುವದು. ಪೂರ್ವಜನ್ಮದ ಋಣಾನುಬಂಧಗಳಿಗೆ ಅನುಗುಣವಾಗಿ ಪಶು, ಪಕ್ಷಿ, ಸುತರು, ಮನೆಮಾರು ಮುಂತಾದವುಗಳೆಲ್ಲಾ ಮನುಷ್ಯನಿಗೆ ದೊರೆಯುವವೆಂಬದೇ ಈ ಕಥೆಯ ತಾತ್ಪರ್ಯವು.

ಒಂದು ದೇಶದಲ್ಲಿ ಭಕ್ತಿಜ್ಞಾನಸಂಪನ್ನನಾದ ಒಬ್ಬ ಅರಸನಿದ್ದನು. ಸಕಲೈಶ್ವರ್ಯಗಳಿಂದಲೂ ವಿರಾಜಮಾನನಾಗಿರುವ ಆ ರಾಜನು ಪ್ರಾಪಂಚಿಕ ಸಂಪತ್ತುಗಳಲ್ಲಿ ಸಂಪೂರ್ಣನಾಗಿದ್ದಂತೆಯೇ ಬ್ರಹ್ಮಜ್ಞಾನಾದಿ ಆಂತರಿಕ ಐಶ್ವರ್ಯಗಳಿಂದಲೂ ಪರಿಪೂರ್ಣನಾಗಿದ್ದನು. ತನ್ನ ಜನ್ಮಜನ್ಮಾಂತರಗಳ ಕರ್ಮಗಳ ಹಾಗು ಅವಶ್ಯಂಭಾವಿಯಾಗಿರುವ ಆ ಕರ್ಮಗಳ ಫಲಭೋಗಗಳ ರಹಸ್ಯವನ್ನು ತಿಳಿದಿರುವ ಆ ರಾಜನು ಮಿಕ್ಕವರಂತೆಯೇ ಪ್ರಾಪಂಚಿಕ ಸುಖವಿಲಾಸಗಳಲ್ಲಿಯೂ ದಿನದ ಕೆಲವೊಂದು ಭಾಗವನ್ನು ಕಳೆಯುತ್ತಿದ್ದನು. ಆದರೆ ತನ್ನ ಆತ್ಮವಿಕಾಸದ ಹಾಗು ಭವಿಷ್ಯದ ಸತ್ಕರ್ಮಸಾಧನೆಯ ಮಾರ್ಗವನ್ನು ಮಾತ್ರ ಮರೆತಿರಲಿಲ್ಲ.

ಇಂತಹ ಜ್ಞಾನಸಂಪನ್ನನಾಗಿ ಪ್ರಾಪಂಚಿಕನಾಗಿರುವ ರಾಜನಿಗೆ ರೂಪ ಗುಣ ಯೌವನ ಸಂಪನ್ನೆಯಾದ ರಾಣಿಯಿದ್ದಳು. ಅರಸನು ಅವಳೊಡನೆ ಸುಖಸಲ್ಲಾಪಗಳಲ್ಲಿಯೂ ವಿನೋದೋಲ್ಲಾಸಗಳಲ್ಲಿಯೂ ದಿನಾಲು ಕೆಲವು ವೇಳೆಯನ್ನು ಕಳೆಯುತ್ತಿದ್ದನು. ಅರಮನೆಯಲ್ಲಿ ಅನೇಕ ದಾಸದಾಸಿಯರಿದ್ದರೂ ಅರಸಿಯು ಪತಿಸೇವೆಯ ಎಲ್ಲ ಕಾರ್ಯಗಳನ್ನು ತಾನೇ ಮಾಡುತ್ತಿದ್ದಳು. ಅವಳಿಗೆ ಪತಿಯಲ್ಲಿರುವ ಅವಿಚಲವಾದ ಶ್ರದ್ಧಾಪ್ರೇಮಗಳೇ ಇದಕ್ಕೆ ಕಾರಣವಾಗಿದ್ದವು. ಒಂದು ದಿನ ಅರಸನು ಮಜ್ಜನಶಾಲೆಯಲ್ಲಿ ಸ್ನಾನಮಾಡುತ್ತಿದ್ದನು. ರಾಣಿಯು ತಾನೇ ವಿಧವಿಧದ ಸುಗಂಧದ ಎಣ್ಣೆಗಳನ್ನು ಹೂಸಿ ಪತಿಯನ್ನು ಎರೆಯುತ್ತಿದ್ದಳು. ಪ್ರಪಂಚಲೋಲುಪನಂತಿರುವ ಅರಸನು ರಾಣಿಯೊಡನೆ ತರತರದ ಚೇಷ್ಟೆಗಳನ್ನು ಮಾಡುತ್ತಿದ್ದನು. ಇಂತು ಆ ಪತಿಪತ್ನಿಯರು ಮಜ್ಜನಶಾಲೆಯಲ್ಲಿ ಚೇಷ್ಟೆಗಳಲ್ಲಿ ತೊಡಗಿರುವಾಗ ಆತನ ಮಂತ್ರಿಯು ಏನೋ ಒಂದು ಅತ್ಯವಶ್ಯದ ಹಾಗು ಅವಸರದ ಕೆಲಸದ ಸಲುವಾಗಿ ಅಲ್ಲಿಗೆ ಬಂದನು. ನಿರ್ವಿಕಾರಚಿತ್ತನೂ ಜ್ಞಾನಿಯೂ ಆದ ಅರಸನು ತಾನು ಈ ಪ್ರಪಂಚವೆಂಬ ನಾಟಕಶಾಲೆಯಲ್ಲಿ ಅಭಿನಯಿಸುತ್ತಿರುವ ನಾಟಕದ ನಟನೆಗಳಂತಿರುವ ಚೇಷ್ಟೆಗಳನ್ನು ಮಂತ್ರಿಯು, ಪ್ರೇಕ್ಷಕನೊಬ್ಬನು,

ಬಂದನೆಂದು ಬದಲಿಸಲಿಲ್ಲ. ಮಂತ್ರಿಯು ತನ್ನ ಒಡೆಯನು ಪತ್ನಿಯೊಡನೆ ನಡಿಸಿರುವ ಹಲವು ವಿಧದ ಚೇಷ್ಟೆಗಳನ್ನೆಲ್ಲ ಕಣ್ಣಾರೆ ಕಂಡು ಬೆರಗಾದನು. ಕಂಡು ಕಲಿಯುವದೊಂದು ಪ್ರಪಂಚದ ಗುಟ್ಟಿನ ಗುಟ್ಟು. ಮಂತ್ರಿಗೆ ತಾನೂ ತನ್ನ ಹೆಂಡತಿಯೊಡನೆ ಇದೇ ರೀತಿಯಾಗಿ ವಿಲಾಸಸುಖವನ್ನು ಅನುಭವಿಸಬೇಕೆಂಬ ಅಭಿಲಾಶೆಯುಂಟಾಯಿತು. ತನ್ನ ಕೆಲಸವನ್ನು ತಿರಿಸಿಕೊಂಡು ಅರಮನೆಯಿಂದ ತಿರುಗಿ ಹೋಗುವಾಗ ಮಂತ್ರಿಯು ಮನಸ್ಸಿನಲ್ಲಿ ಇದೊಂದು ಹೆಚ್ಚಿನ ಭಾವನೆಯನ್ನು ತನ್ನ ಮನೆಗೆ ಒಯ್ದನು.

ಅಂದು ಸ್ನಾನಮಾಡುವ ವೇಳೆಯಾದ ಕೂಡಲೆ ಮಂತ್ರಿಯು ಅಂತಃಪುರಕ್ಕೆ ಹೋಗಿ ಹೆಂಡತಿಯನ್ನು ಕರೆದುಕೊಂಡು ಮಜ್ಜನ ಶಾಲೆಯನ್ನು ಸೇರಿದನು. ಆತನ ಹೆಂಡತಿಗೆ ಗಂಡನ ಈ ಸ್ಥಿತಿಯು ವಿಚಿತ್ರವಾಗಿ ತೋರಿತು. ಮಂತ್ರಿಯು ಸುಗಂಧದ ಎಣ್ಣೆಯ ಬಾಟಲಿಗಳನ್ನು ಹೆಂಡತಿಯು ಕೈಗೆ ಕೊಟ್ಟು ತನ್ನ ಮೈಗೆ ಪೂಸೆಂದು ಆಜ್ಞಾಪಿಸಿದನು. ಹೆಂಡತಿಯು ದಾಸಿಯರನ್ನು ಕರೆಯುವೆನೆನ್ನಲು ಅದಕ್ಕೆ ಅವನು ಸಮ್ಮತಿಸದೆ ನೀನೇ ನನ್ನನ್ನು ಎರೆಯಬೇಕೆಂದು ಹಟಮಾಡಿದನು. ಅವಳು ಇಂದು ಇದೇನೋ ವಿಚಿತ್ರ ವಿಚಾರವು ಗಂಡನ ಮನಸ್ಸಿನಲ್ಲಿ ಬಂದಿರುವದೆಂದು ತಿಳಿದು ಮೈಗೆಲ್ಲ ಎಣ್ಣೆಯನ್ನು ಹೂಸಿ ಎರೆಯತೊಡಗಿದಳು. ಅರಸನು ಮಾಡುತ್ತಿದ್ದ ಚೇಷ್ಟೆಗಳನ್ನು ನೋಡಿ ಬಂದ ಮಂತ್ರಿಯು ನಡುನಡುವೆ ಬಗೆಬಗೆಯ ವಿಚಿತ್ರ ಚೇಷ್ಟೆಗಳನ್ನು ಆರಂಭಿಸಿದನು. ಹೆಂಡತಿಯು ಒಮ್ಮೆ, ಎರಡು ಸಾರೆ, ಮೂರು ಸಾರೆ ನಿಷೇಧಿಸಿದಳು. ಕೊನೆಗೆ ಅವಳಿಗೆ ಕೋಪವುಂಟಾಯಿತು. ಪತಿಯು ಅಲ್ಲದ್ದೊಂದು ಚೇಷ್ಟೆಯನ್ನು ನಡಿಸಿದ್ದನ್ನು ಕಂಡು ಕೋಪಗೊಂಡ ಅವಳು ಕೈಯೊಳಗಿನ ತಂಬಿಗೆಯನ್ನು ಅವನ ಮುಖಕ್ಕೆ ಅಪ್ಪಳಿಸಿದಳು. ಆ ಹೊಡೆತದಿಂದ ಮಂತ್ರಿಯ ಮುಂದಿನವೆರಡು ಹಲ್ಲುಗಳು ಉದುರಿದವು ! ಕೊನೆಗೆ ಅವನು ತಾನು ಅರಸನಷ್ಟು ಸುದೈವಿಯಲ್ಲವೆಂದು ಚಿಂತಿಸುತ್ತ ತನ್ನ ನಿತ್ಯದ ಕೆಲಸಗಳನ್ನೆಲ್ಲ ಮುಗಿಸಿಕೊಂಡು ಮಧ್ಯಾಹ್ನದ ಮೇಲೆ ರಾಜಸಭೆಗೆ ಬಂದನು.

ಜ್ಞಾನಿಯಾದ ಅರಸನು ತನ್ನ ಚೇಷ್ಟೆಗಳನ್ನೆಲ್ಲ ನೋಡಿಕೊಂಡು ಹೋಗಿರುವ ಮಂತ್ರಿಯು ತನ್ನನ್ನು ಅನುಕರಣ ಮಾಡಿ ಎಂಥ ಅಪಹಾಸ್ಯಕ್ಕೆ ಗುರಿಯಾಗುವನೋ ಎಂಬ ವಿಚಾರದಲ್ಲಿಯೇ ಇದ್ದನು. ಎಡದ ಕೈಯಲ್ಲಿ ಉಪ್ಪರಣಿಯ ಸೆರಗನ್ನು ಹಿಡಿದು ಬಾಯಿಯನ್ನು ಮುಚ್ಚಿಕೊಂಡು ಇದಿರಿಗೆ ಬರುತ್ತಿರುವ ಮಂತ್ರಿಯನ್ನು ನೋಡಿ ಅರಸನು "ಪ್ರಥಮಚುಂಬನೇ ದಂತಭಗ್ನ" ವಾಯಿತೆಂದು ತೋರುತ್ತದೆ ಎಂದನು.

ಮಂತ್ರಿಯು ದುಃಖದಿಂದ ಅರಸನ ಮುಖವನ್ನು ನೋಡಿದನು. ಅರಸನು ಸಭೆಯಿಂದ ಎದ್ದು ಮಂತ್ರಿಯನ್ನು ಸಂಗಡ ಕರೆದುಕೊಂಡು ಏಕಾಂತವಾದೊಂದು ಸ್ಥಳಕ್ಕೆ ಹೋಗಿ ಕುಳಿತುಕೊಂಡು ನಡೆದ ಸಮಾಚಾರಗಳನ್ನೆಲ್ಲ ಕೇಳಿಕೊಂಡನು. ಜ್ಞಾನಿಯಾದ

ಅರಸನು—" ತಮ್ಮಾ, ನೀನು ಇನ್ನೂ ಅಜ್ಞಾನಾಂಧಕಾರದಲ್ಲಿ ತೊಳಲಾಡುತ್ತಿರುವೆ. ಇನ್ನೊಬ್ಬರು ಪ್ರಪಂಚದಲ್ಲಿ ಸುಖದಿಂದ ಇರುವದನ್ನು ನೋಡಿ ತಾನೂ ಹಾಗೆಯೇ ಸುಖಿಯಾಗಬೇಕೆಂದು ಬಯಸುವದು ಎಷ್ಟು ಮಾತ್ರವೂ ಸರಿಯಲ್ಲ. ಮನುಷ್ಯನಿಗೆ ಪ್ರಪಂಚದ ಸುಖದುಃಖಗಳು ಅವನ ಪೂರ್ವಜನ್ಮದ ಕರ್ಮಗಳ ಫಲದಂತೆ ಉಂಟಾಗುತ್ತಿರುವವು. ಅವನ ಹೆಂಡತಿ, ಮಕ್ಕಳು, ಅಪ್ತೇಷ್ಟರು, ಶತ್ರುಗಳು, ಮಿತ್ರರು ಇವರೆಲ್ಲರೂ ಅವರವರ ಪೂರ್ವಜನ್ಮದ ಋಣಾನುಬಂಧಗಳಿಂದಲೇ ಉಂಟಾಗಿರುವರು. ಮತ್ತು ಅವರೆಲ್ಲರೂ ಒಬ್ಬರಿಗೊಬ್ಬರು ತಮ್ಮ ಹಿಂದಿನ ಜನ್ಮದ ಕರ್ಮಗಳ ಫಲೋಪಭೋಗಕ್ಕಾಗಿಯೇ ಈಗ ಜನ್ಮಕ್ಕೆ ಬಂದಿರುವರು. ಆದ್ದರಿಂದ ನಾನು ನನ್ನ ಹೆಂಡತಿಯೊಡನೆ ನಡಿಸಿರುವ ಸುಖಸಲ್ಲಾಪಗಳನ್ನೂ ವಿನೋದೋಲ್ಲಾಸಗಳನ್ನೂ ನೋಡಿ ನೀನು ಅವುಗಳನ್ನು ಅನುಕರಣೆ ಮಾಡುವದು ಸರಿಯಾಗಲಾರದು. ಯಾವ ಕಾರ್ಯಗಳಿಂದ ನನಗೆ ಸುಖವಾಗಬಹುದೋ ಅವೇ ಕಾರ್ಯಗಳಿಂದ ನಿನಗೆ ಕಷ್ಟವುಂಟಾಗಬಹುದೆಂಬದನ್ನು ನೀನು ಈಗ ಪ್ರತ್ಯಕ್ಷ ಅನುಭವದಿಂದ ಕಂಡುಕೊಂಡಿರುವೆಯಾದ್ದರಿಂದ ನಾನು ಈ ವಿಷಯವಾಗಿ ಹೆಚ್ಚಿಗೆ ಹೇಳಬೇಕಾಗಿಲ್ಲ. ಇನ್ನು ನನ್ನ ಹಾಗು ನಿನ್ನ ದಾಂಪತ್ಯದ ಸಂಬಂಧದಿಂದ ಕೆಲವು ಮಾತುಗಳನ್ನು ಹೇಳುವೆನು.

ನಾನು ಪೂರ್ವಜನ್ಮದಲ್ಲಿ ಒಬ್ಬ ಬ್ರಾಹ್ಮಣನಾಗಿದ್ದೆನು. ಒಬ್ಬ ಕಟುಕನು ಒಂದು ದಿನ ನೆರೆಯೂರಿಂದ ಒಂದು ಆಕಳನ್ನು ಕೊಂಡು ಕೊಂಡು ತನ್ನ ಅಂಗಡಿಗೆ ಒಯ್ಯುವದನ್ನು ನೋಡಿದೆನು. ಪರಮಪೂಜ್ಯವಾದ ಗೋಮಾತೆಯನ್ನು ಕಟುಕನು ಕಡಿಯುವದಕ್ಕೆ ಒಯ್ಯುವದನ್ನು ನೋಡಲಾರದೆ ಅವನು ಬೇಡಿದಷ್ಟು ಹಣವನ್ನು ಕೊಟ್ಟು ಆ ಆಕಳನ್ನು ಕೊಂಡುಕೊಂಡೆನು. ಮತ್ತು ಅದನ್ನು ಬಹುಕಾಲದವರೆಗೆ ನಾನಾ ರೀತಿಯಿಂದ ಸೇವೆಮಾಡಿ ಸಂರಕ್ಷಿಸಿದೆನು. ನಾನು ಈ ಜನ್ಮದಲ್ಲಿ ಅರಸನಾಗಿ ಹುಟ್ಟಲು ಆ ನನ್ನ ಉಪಕಾರವನ್ನು ತೀರಿಸುವದಕ್ಕಾಗಿ ಆ ಆಕಳು ನನ್ನ ಹೆಂಡತಿಯಾಗಿ ನನ್ನನ್ನು ಸೇರಿರುವದು. ಇದೇ ರೀತಿಯಾಗಿ ನಿನ್ನ ಹೆಂಡತಿಯು ಹಿಂದಿನ ಜನ್ಮದಲ್ಲಿ ಒಂದು ರಣಹದ್ದಾಗಿದ್ದಳು. ಆ ರಣಹದ್ದು ಒಂದು ದಿನ ಭರ್‍ರನೆ ಎರಗಿ ಒಂದು ಸರ್ಪವನ್ನು ಎತ್ತಿಕೊಂಡು ಮೇಲೆ ಹಾರಿಹೋಗುತ್ತಿತ್ತು. ಹದ್ದು ಹಾವಿನ ಬಾಲವನ್ನು ಕಚ್ಚಿಕೊಂಡಿತ್ತು. ಹಾವು ಪ್ರಾಣಭಯದಿಂದ ಹದ್ದಿನ ಕಾಲನ್ನು ಸುತ್ತಿಕೊಂಡು ಅದನ್ನು ಕಡಿಯಬೇಕೆಂಬ ವಿಚಾರದಲ್ಲಿದ್ದಿತು. ಆ ಹೊತ್ತಿನಲ್ಲಿ ನೀನು ಬಳಿಯಲ್ಲಿಯೇ ನಿಂತು ನೋಡುತ್ತಿದ್ದು ಒಂದು ಕಲ್ಲು ಒಗೆಯಲು ಅಕಸ್ಮಾತ್ತಾಗಿ ಆ ಕಲ್ಲು ಹಾವಿನ ಹೆಡೆಗೆ ತಗಲಿ ಅದರ ಹಲ್ಲು ಮುರಿಯಿತು. ಹದ್ದು ಉಳಿದುಕೊಂಡಿತು. ಇದಿಷ್ಟೇ ಋಣದಿಂದ ಆ ಹದ್ದು ಈ ಜನ್ಮದಲ್ಲಿ ನಿನ್ನ ಹೆಂಡತಿಯಾಗಿ ನಿನ್ನನ್ನು ಸೇರಿರುವದು. ಇದರಿಂದ ನಮ್ಮ ನಿಮ್ಮ ದಾಂಪತ್ಯದ ಪೂರ್ವಜನ್ಮದ ಋಣಾನುಬಂಧವು ಎಷ್ಟುಮಟ್ಟಿ ದೃಢವಾಗಿರುವದೆಂಬದು ಗೊತ್ತಾದ ಹಾಗಾಯಿತು. ಆ

ಋಣಾನುಬಂಧಕ್ಕೆ ಅನುಗುಣವಾಗಿ ನಾವು ಈ ಜನ್ಮದಲ್ಲಿ ಹೆಚ್ಚು ಕಡಿಮೆ ದಾಂಪತ್ಯ ಸುಖವನ್ನು ಅನುಭವಿಸಬೇಕಲ್ಲದೆ ನಾನು ಅನುಭವಿಸುವಂಥದೇ ಸುಖವನ್ನು ನೀನು ಅನು ಭವಿಸುವೆಯೆಂದರೆ ಹೇಗಾದೀತು ? ಕೆಲವರು ಪರಸ್ಪರರ ಹಿತಸಂಬಂಧದ ಋಣವನ್ನು ತೀರಿಸುವದಕ್ಕಾಗಿ ಈ ಜನ್ಮದಲ್ಲಿ ಪತಿಪತ್ನಿಯರಾಗಿರುವರು. ಮತ್ತೆ ಕೆಲವರು ತಮ್ಮ ಪೂರ್ವದ ಹಗೆಯನ್ನು ಸಾಧಿಸಿಕೊಳ್ಳುವದಕ್ಕಾಗಿಯೇ ಒಂದು ಪ್ರಪಂಚಕ್ಕೆ ಸೇರಲು ಜನ್ಮಿಸಿರುವರು. ಪತಿಪತ್ನಿಯರಾಗಿ ಅಥವಾ ಇತರ ಸಂಬಂಧಿಕರಾಗಿ ಪ್ರಪಂಚದಲ್ಲಿ ಜನ್ಮಿ ಸಿದ ಮಾತ್ರದಿಂದ ಅವರೆಲ್ಲರೂ ಒಬ್ಬರಿಗೊಬ್ಬರು ಅನುಕೂಲರಾಗಿಯೇ ಇರಬೇಕೆಂದಾ ಗಲಿ ಅವರು ಒಬ್ಬರಿಗೊಬ್ಬರು ಸುಖಸಮಾಧಾನಗಳಿಗೆ ಕಾರಣರಾಗಿಯೇ ಇರಬೇ ಕೆಂದಾಗಲಿ ಸಿದ್ಧಾಂತವಿರುವದಿಲ್ಲ. ಈಗ ಒಬ್ಬಳು ಹೆಂಡತಿಯಾಗಿದ್ದರೂ ಅವಳು ತನ್ನ ಪೂರ್ವಜನ್ಮದ ಹಗೆಯನ್ನು ಸಾಧಿಸಲೆಂದೇ ಬಂದಿದ್ದರೆ ಅವಳು ಆ ಹಗೆಯನ್ನೇ ಸಾಧಿಸಿ ಕೊಳ್ಳುವಳಲ್ಲದೆ ಪತಿಗೆ ಎಂದೂ ಸುಖವನ್ನು ಕೊಡಲಾರಳು. ಒಂದುಸಾರೆ ತನ್ನ ಪತಿ ಯನ್ನು ವಂಚಿಸಿದವಳು ಮುಂದೆ ಹಲವು ಜನ್ಮಗಳಲ್ಲಿ ವೈಧವ್ಯಪಂಕದಲ್ಲಿ ತೊಳಲಾಡ ಬೇಕಾಗುವದು. ತಮ್ಮ ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಸುವ ಗಂಡಂದಿರನ್ನು ವಂಚಿಸಿ ಅನ್ಯರಲ್ಲಿ ಅನುರಕ್ತಳಾಗಿರುವ ಎಷ್ಟೋ ಚಾಂಡಾಲಿನಿಯರನ್ನೂ ಈ ಲೋಕದಲ್ಲಿ ಕಾಣ ಬಹುದು. ವಿವೇಕಶಾಲಿಯಾದ ಪತಿಯು ಅಂತಹ ದುರ್ಬುದ್ಧಿಯನ್ನು ಕಂಡು ಪಶ್ಚಾ ತ್ತಾಪದಿಂದ ಕಣ್ಣೀರು ಸುರಿಸುವದನ್ನು ನೋಡಿಯೂ ಕಂಡೂ ಕಾಣದಂತಿದ್ದು, ತನ್ನ ದುರಾಚಾರವನ್ನು ಬಿಡದಿರುವಂಥ ನರರಾಕ್ಷಸಿಗೆ ಭಗವಂತನು ಮುಂದೆ ಎಂತಹ ಶಿಕ್ಷೆ ಯನ್ನು ವಿಧಿಸಬಹುದು? ಇದರಂತೆ ಪ್ರಪಂಚದೊಳಗಿನ ಎಲ್ಲ ಸಂಬಂಧಿಕರ ಹಾಗು ಅವರಿಂದಾಗುವ ಸುಖದುಃಖಗಳ ವಿಚಾರವನ್ನು ತಿಳಿದುಕೊಳ್ಳತಕ್ಕದ್ದು.

ಮಂತ್ರಿಯು ಅರಸನಿಂದ ಇನ್ನೂ ಇಂತಹ ಹಲವು ಉಪದೇಶಗಳನ್ನು ಹೊಂದಿ ಸುಖಿಯಾದನು.

**ಸಾ॥ ಹಿಂದೆ ಮಾಡಿದ ಹಿತಾಹಿತ ಕರ್ಮ ಫಲಭೋಗ ।**
**ಕಿಂದು ಸತಿಸುತರೆಂದು ಜನಿಸಿ ॥**
**ಸಂದಿರುವರೈಯ ನೀನವರೊಳು ಕೂಡದೆ ।**
**ಹಿಂದು ಮುಂದರಿತು ನಡೆಯುವದು ॥ ೧ ॥**

---

## ೩೩ ನ್ಯಾಯಪ್ರಿಯತೆ.



ಸರ್ವ ಮಂಗಳಾಸ್ಪದವಾದ ಪುಣ್ಯಪಟ್ಟಣ ಚಂಪಕನಗರಿಯಲ್ಲಿ ಸತ್ಯಪ್ರೇಮಿಯಾದ ಹಂಸಧ್ವಜ ಮಹಾರಾಜನು ರಾಜ್ಯವಾಳುತ್ತಿದ್ದನು. ರಾಜನು ಏಕಪತ್ನೀವ್ರತಪರಾಯಣನಾಗಿದ್ದುದಲ್ಲದೆ ಪ್ರಜೆಗಳೆಲ್ಲರೂ ಆತನನ್ನೇ ಅನುಕರಣ ಮಾಡಿ ಏಕಪತ್ನೀವ್ರತರೂ ಸತ್ಯಶೀಲರೂ ಧರ್ಮಪರಾಯಣರೂ ಆಗಿ ಒಪ್ಪುತ್ತಿದ್ದರು. ಶಂಖಲಿಖಿತರು ಆತನ ಕುಲಪುರೋಹಿತರು. ಅವರಿಬ್ಬರೂ ಅಣ್ಣತಮ್ಮಂದಿರಾಗಿದ್ದರು; ಪರಸ್ಪರರ ವಿಷಯದಲ್ಲಿ ಎಷ್ಟು ಪ್ರೇಮವುಳ್ಳವರಾಗಿದ್ದರೋ ಅಷ್ಟೇ ನ್ಯಾಯಪ್ರೀತಿಯುಳ್ಳವರೂ ಆಗಿದ್ದರು; ಆ ಪುರೋಹಿತರ ಮಾತಿನಿಂದಲೇ ಹಂಸಧ್ವಜ ಮಹಾರಾಜನು ಅಪ್ರತಿಮವೀರನಾದ ತನ್ನ ಮಗ ಸುಧನ್ವನನ್ನು ಕಾದ ಎಣ್ಣೆಯ ಕೊಪ್ಪರಿಗೆಯಲ್ಲಿ ಹಾಕಿಸಿದ ಕಥೆಯು ಸರ್ವರಿಗೂ ಗೊತ್ತಿರುವದು. ಆ ಶಂಖಲಿಖಿತರ ನ್ಯಾಯಪ್ರಿಯತೆಯ ನಿದರ್ಶನದ ಇನ್ನೊಂದು ಕಥೆಯನ್ನು ಇಲ್ಲಿ ಹೇಳುವೆವು.

ಶಂಖನು ತನ್ನ ತಪೋವನದಲ್ಲಿ ನಿರಾಹಾರದಿಂದಿದ್ದು ತಪಸ್ಸನ್ನು ಆಚರಿಸುತ್ತಿದ್ದನು. ಸಮಾಧಿ ಭಂಗವಾದಾಗ ಎಂದಾದರೊಂದು ದಿನ ಒಂದು ಮಾವಿನ ಹಣ್ಣನ್ನು ಸೇವಿಸುವನು. ಅವನ ತಪೋವನದೊಳಗಿನ ಒಂದು ಮಾವಿನ ಗಿಡದ ಬುಡದಲ್ಲಿ ಒಂದು ಮಾವಿನ ಹಣ್ಣು ಬಿದ್ದಿತ್ತು. ಶಂಖನ ತಮ್ಮನಾದ ಲಿಖಿತನು ಅಕಸ್ಮಾತ್ ಅಣ್ಣನ ಆಶ್ರಮಕ್ಕೆ ಬಂದವನು ಗಿಡದ ಕೆಳಗೆ ಬಿದ್ದಿರುವ ಹಣ್ಣನ್ನು ನೋಡಿ ಅದನ್ನು ಆರಿಸಿಕೊಂಡು ತಿಂದು ಬಿಟ್ಟನು. ಬಳಿಕ ಅಣ್ಣನ ದರ್ಶನಕ್ಕೆ ಹೋದನು. ಸಮಾಧಿಸ್ಥನಾಗಿದ್ದ ಶಂಖನು ತಮ್ಮನ ಬರುವಿಕೆಯನ್ನೂ ಆತನು ಮಾವಿನ ಹಣ್ಣನ್ನು ತಿಂದಿರುವುದನ್ನೂ ಜ್ಞಾನದೃಷ್ಟಿಯಿಂದಲೇ ತಿಳಿದು ಎಚ್ಚತ್ತು ತಮ್ಮನನ್ನು ಕುರಿತು ತನಗಾಗಿ ಕಾಯ್ದಿಟ್ಟುಕೊಂಡ ಮಾವಿನ ಹಣ್ಣನ್ನು ತಿಂದುದೇಕೆಂದು ಕೇಳಿದನು. ಲಿಖಿತನು—“ಅಣ್ಣಾ, ಹಸಿವೆಯಿಂದ ಬಳಲುತ್ತಿದ್ದ ನಾನು ನಿನ್ನ ಹಣ್ಣನ್ನು ತಿಂದುದು ನಿಜವೇ ಸರಿ. ನಾನು ನಿನಗೆ ಅನ್ಯನೇ? ನನಗೆ ಒಂದು ಮಾವಿನ ಹಣ್ಣನ್ನು ಕೊಡಲಾರೆಯಾ?” ಎಂದನು. ಅದಕ್ಕೆ ಶಂಖನು—“ತಮ್ಮಾ, ಒಂದು ಮಾವಿನ ಹಣ್ಣಿನ ಪ್ರಶ್ನೆಯಲ್ಲ. ನೀನು ಈಗ ಪರರ ಸೊತ್ತನ್ನು ಅಪಹರಿಸಿದ ಅಪರಾಧಕ್ಕೆ ಗುರಿಯಾಗಿರುವೆ. ನೀನು ನನ್ನನ್ನು ಕೇಳಿ ತಕ್ಕೊಂಡಿದ್ದರೆ ಅದು ಅಪರಾಧವೆನಿಸುತ್ತಿರಲಿಲ್ಲ. ನನ್ನನ್ನು ಕೇಳಿ ತೆಗೆದುಕೊಳ್ಳಬೇಕೆಂಬ ವಿವೇಕವೂ, ಅಷ್ಟು ಮನಸ್ಥೈರ್ಯವೂ ನಿನ್ನಲ್ಲಿ ಇಲ್ಲದುದಕ್ಕಾಗಿ ನೀನು ಶಿಕ್ಷೆಯನ್ನು ಅನುಭವಿಸಬೇಕಾಗಿದೆ.” ಎಂದು ನ್ಯಾಯನಿಷ್ಠುರನಾಗಿ ನುಡಿದನು.

ಲಿಖಿತನು ನಿರುಪಾಯನಾಗಿ ತನ್ನ ತಪ್ಪು ಒಪ್ಪಿಕೊಂಡು ಅದಕ್ಕೆ ಶಿಕ್ಷೆಯೇನೆಂದು ಕೇಳಿದನು. ಶಂಖನು “ಶಿಕ್ಷೆಯನ್ನು ವಿಧಿಸತಕ್ಕವನು ನಾನಲ್ಲ; ಇದು ರಾಜ್ಯಕರ್ತ

ನಾದ ಹಂಸಧ್ವಜ ಮಹಾರಾಜನಿಗೆ ಸೇರಿದುದು; ನಡೆ ರಾಜಸಭೆಯಲ್ಲಿ ನಿನಗೆ ತಕ್ಕ ದಂಡನೆಯಾಗಲಿ" ಎಂದನು. ಇಬ್ಬರೂ ಚಂಪಕನಗರಕ್ಕೆ ಹೊರಟರು.

ಅರಸನು ಒಡ್ಡೋಲಗದಲ್ಲಿ ಮಂತ್ರಿಪರಿಜನರಿಂದ ವಿರಾಜಮಾನನಾಗಿರುವಾಗ ಶಂಖಲಿಖಿತರು ಬಂದು ಆಶೀರ್ವಾದ ಮಾಡಿದ ಬಳಿಕ ಶಂಖನು ನಡೆದ ಸಂಗತಿಯನ್ನೆಲ್ಲ ಹೇಳಿ ನ್ಯಾಯಾಪೇಕ್ಷಿಯಾಗಿ ನಿಂತುಕೊಂಡನು. ಲಿಖಿತನು ತನ್ನ ತಪ್ಪು ಒಪ್ಪಿಕೊಂಡು ತಕ್ಕ ಶಿಕ್ಷೆಯನ್ನು ಅನುಭವಿಸಲು ಸಿದ್ಧನಾಗಿದ್ದನು. ಅರಸನು ಗುರುಗಳಿಗೆ ತಕ್ಕ ಶಿಷ್ಯನಾಗಿದ್ದನು. ರಾಜದೂತರನ್ನು ಕರೆದು ಪರರ ಸೊತ್ತನ್ನು ಅಪಹರಿಸಿದ ಅಪರಾಧಕ್ಕಾಗಿ ಲಿಖಿತನ ಕೈಗಳನ್ನು ಕತ್ತರಿಸಿ ಚಲ್ಲಿರೆಂದು ಅಪ್ಪಣೆಕೊಡಿಸಿದನು. ಸಭಿಕರೆಲ್ಲರೂ ಬೆರಗಾದರು. ರಾಜಡೂತರು ಅರಸನ ಅಪ್ಪಣೆಯನ್ನು ನೆರವೇರಿಸಲು ಶಂಖಲಿಖಿತರು ತಮ್ಮ ಆಶ್ರಮಕ್ಕೆ ತೆರಳಿದರು.

ಮತ್ತೆ ಕೆಲವು ದಿನಗಳ ತರುವಾಯ ಲಿಖಿತನು ರಾಜಸಭೆಗೆ ಬಂದು ತನ್ನ ಕೈಗಳನ್ನು ಕತ್ತರಿಸಬೇಕೆಂದೂ ಅನಪೇಕ್ಷಿತವಾಗಿ ತನ್ನ ಕೈಗಳು ಮತ್ತೆ ಮೊಳೆತುವೆಂದೂ ಅರಿಕೆಮಾಡಿಕೊಂಡನು. ಅರಸನು ಅಪರಾಧವಿಲ್ಲದೆ ಶಿಕ್ಷೆಯನ್ನು ವಿಧಿಸಲಾರದೆ ಶಂಖನನ್ನು ಕರೆಯಿಸಿ ಕೇಳಲು, ನ್ಯಾಯನಿಷ್ಠುರ ಬುದ್ಧಿಯಿಂದಲೂ ತಮ್ಮನಿಗೆ ಬುದ್ಧಿಗಲಿಸುವದಕ್ಕಾಗಿಯೂ ಆತನ ಕೈಗಳನ್ನು ಕತ್ತರಿಸಲು ಬಯಸಿದೆನಲ್ಲದೆ ಆತನ ಮೇಲಿನ ದ್ವೇಷಬುದ್ಧಿಯಿಂದ ತಾನು ಹಾಗೆ ಮಾಡಿರಲಿಲ್ಲವೆಂದೂ ತನ್ನ ತಪೋಬಲದಿಂದ ಆ ಕತ್ತರಿಸಿದ ಕೈಗಳನ್ನು ಮತ್ತೆ ಮೊಳೆಯುವಂತೆ ತಾನೇ ಮಾಡಿದೆನೆಂದೂ ಶಂಖನು ಅರಸನಿಗೆ ಅರುಹಿದನು.

ಇಂತಹ ನ್ಯಾಯಬುದ್ಧಿಯೇ ಸರ್ವರಲ್ಲಿಯೂ ಇರಬೇಕಲ್ಲದೆ ದ್ವೇಷಾಸೂಯೆಗಳೂ ದೀರ್ಘದ್ವೇಷವೂ ಮನುಷ್ಯನಲ್ಲಿ ಎಂದೂ ಇರಕೂಡದು. ಅಪರಾಧ ಮಾಡಿದವರೂ ಕೂಡ ತಮ್ಮ ಪಾಲಿಗೆ ಬರುವ ಶಿಕ್ಷೆಯನ್ನು ನಿರ್ಮಲ ಮನಸ್ಸಿನಿಂದ ಅನುಭವಿಸಿ ಪುನಃ ಇಂತಹ ಅಪರಾಧವಾಗದಂತೆ ನೋಡಿಕೊಳ್ಳತಕ್ಕದ್ದು.

ಅಜ್ಞಾನಮೂಲಕವಾಗಿಯೋ ಪೂರ್ವ ಋಣಾನುಬಂಧಮೂಲಕವಾಗಿಯೋ ಒಂದು ತಪ್ಪು ಸಂಭವಿಸಿದರೆ ಅದನ್ನು ನಿರ್ಮಲ ಮನಸ್ಸಿನಿಂದ ಒಪ್ಪಿಕೊಂಡು ಮುಂದೆ ಅಂತಹ ಅಪರಾಧವಾಗದಂತೆ ನಡೆಯುವದು ವಿವೇಕಿಗಳ ಲಕ್ಷಣವು.

**ಸಾಂ॥ ಶಂಖಲಿಖಿತರ ನ್ಯಾಯನಿಷ್ಠುರತೆಯಿಂದದೊಳು ।**
**ಸಂಕಟಂಗಳಿಗಂಜದಿಹುದು ॥**
**ಶಂಖಚಕ್ರಧಾರಿ ಸಕಲಜಗಕಾಧಾರಿ ।**
**ಸಂಕಟಂಗಳ ನೀಗಿ ಪೊರೆವಂ ॥ ೧ ॥**

## ೩೪ ಪೂರ್ವಸಂಚಿತ.





ಊರಹೊರಗಣ ಉಪವನದಲ್ಲಿ ಒಬ್ಬ ಸಾಧುಪುರುಷನು ವಾಸವಾಗಿದ್ದನು. ಜ್ಞಾನಿಯಾದ ಸತ್ಪುರುಷನ ಪರೀಕ್ಷೆಗಾಗಿ ಕೆಲವು ಜನರು ಒಂದು ಯುಕ್ತಿಯನ್ನು ಹೂಡಿದರು. ಅವರು ಊರೊಳಗಿನ ಸರ್ವಾಂಗಸುಂದರಿಯೂ ಸಕಲ ಕಲಾನಿಪುಣಳೂ ಎನಿಸಿದ ವೇಶ್ಯೆಯೊಬ್ಬಳನ್ನು ಆ ಸಾಧುವಿನ ಬಳಿಗೆ ಕಳುಹಿಸಿದರು.

ಕಾಮಕ್ರೋಧಾದಿ ಷಡ್ರಿಪುಗಳನ್ನು ಜಯಿಸಿದ ಸಾಧುವು ತನ್ನ ಬಳಿಗೆ ಬಂದ ವೇಶ್ಯೆಯನ್ನು ನೋಡಿ ಚಿತ್ತಚಾಂಚಲ್ಯವನ್ನು ಹೊಂದಲಿಲ್ಲ. ಡಾಂಭಿಕ ವೇಷಧಾರಿಗಳಾದ ಸಾಧುಗಳ ಹಾಗೆ ಅವಳನ್ನು ತಿರಸ್ಕರಿಸಲಿಲ್ಲ. ಆದರದಿಂದ ಅವಳನ್ನು ತನ್ನ ಬಳಿಯಲ್ಲಿ ಉಳಿಸಿಕೊಂಡನು. ಸತ್ಪುರುಷನ ಸಹವಾಸದಿಂದ ವೇಶ್ಯೆಯ ಚಿತ್ತವೃತ್ತಿಯು ಬದಲಾಯಿತು. ಊರವರ ದುರುಪದೇಶದಿಂದ ಸಾಧುವಿನ ಪರೀಕ್ಷಾಕಾರ್ಯದಲ್ಲಿ ಪ್ರವೃತ್ತಳಾದ ವೇಶ್ಯೆಯು ಪರಾಭೂತಳಾಗಿ ಸಾಧುವಿನ ಸದ್ವೃತ್ತಿಯನ್ನು ಸ್ವೀಕರಿಸಿದಳು. ಸ್ಪರ್ಶಮಣಿಯ ಸ್ಪರ್ಶಮಾತ್ರದಿಂದ ಕಬ್ಬಿಣವು ಬಂಗಾರವಾಗುವಂತೆ ಸತ್ಪುರುಷನ ಅಲ್ಪಕಾಲದ ಸಹವಾಸದಿಂದ ವೇಶ್ಯೆಯ ಅವಗುಣಗಳೆಲ್ಲಾ ಮಾಯವಾದವು. ಅವಳು ಸಾಧುವಿನ ಪರಮ ಶಿಷ್ಯಳಾದಳು.

ಸಂಸಾರದಲ್ಲಿ ಯಾವ ವಿಧದಿಂದಲೂ ಆಸ್ತಿಕಭಾವನೆಯನ್ನು ತೋರಿಸದಿರುವ ಸಾಧುಪುರುಷನು ವೇಶ್ಯೆಯ ವಿಶುದ್ಧವಾದ ಭಕ್ತಿಭಾವನೆಯನ್ನೂ ನಿಜವಾದ ಸದಾಚಾರವನ್ನೂ ಕಂಡು ಅವಳಿಗೆ ಪಾರಮಾರ್ಥಿಕ ವಿಚಾರಗಳನ್ನು ಬೋಧಿಸತೊಡಗಿದನು. ಸಾಧುವಿನ ಉಪದೇಶದಿಂದ ಆ ವೇಶ್ಯೆಯಲ್ಲಿಯೂ ಜ್ಞಾನೋದಯವಾಯಿತು.

ಹೀಗೆಯೇ ಆ ಸಾಧುಪುರುಷನು ವೇಶ್ಯೆಯ ಸಹವಾಸದಲ್ಲಿ ಕೆಲವು ವರುಷಗಳನ್ನು ಕಳೆದನು. ಊರವರು ತಮ್ಮ ಯುಕ್ತಿಯು ಸಫಲವಾಗದಿರುವದನ್ನು ಕಂಡು ಇನ್ನೊಂದು ಯುಕ್ತಿಯನ್ನು ಹೂಡಿದರು. ಅವರು ಸುಂದರವಾದೊಂದು ಪಾದರಕ್ಷೆಯನ್ನು ಮಾಡಿಸಿ ವೇಶ್ಯೆಯ ಕೈಯೊಳಗೆ ಕೊಟ್ಟು ಅದನ್ನು ಸಾಧುವಿನ ಕುಟೀರಕ್ಕೆ ಕಳುಹಿಸಿದರು. ಹೊನ್ನನ್ನೂ ಮಣ್ಣನ್ನೂ ಸಮವೆನಿಸಿ ನಡೆಯುವ ಸಾಧುವು ತನ್ನ ಕುಟೀರದಲ್ಲಿ ತಂದಿಟ್ಟಿರುವ ಪಾದರಕ್ಷೆಯನ್ನು ನೋಡಿದರೂ ನೋಡದವನಂತೆ ಇದ್ದನು.

ಇರಇರುತ್ತ ಒಂದುದಿನ ಸಾಧುವಿನ ನಿರ್ಯಾಣಕಾಲವು ಸಮೀಪಿಸಿತು. ಪ್ರಾಣೋತ್ಕ್ರಮಣಸಮಯದಲ್ಲಿ ಆಕಸ್ಮಾತ್ತಾಗಿ ಆ ಪಾದರಕ್ಷೆಯು ಸಾಧುವಿನ ದೃಷ್ಟಿಗೆ ಬಿದ್ದಿತು. ದೈವಯೋಗದಿಂದ ಮನಸ್ಸಿನಲ್ಲಿ—" ಇಂತಹ ಸುಂದರವಾದ ಪಾದರಕ್ಷೆ

ಯನ್ನು ನಾನು ಒಂದು ದಿನವೂ ಧರಿಸಲಿಲ್ಲವಲ್ಲಾ" ಎಂದು ಭಾವಿಸುತ್ತಿರುವಾಗ ಸಾಧುವು ಪರಲೋಕಕ್ಕೆ ತೆರಳಿದನು. ವೇಶ್ಯೆಯು ಗುರುವಾದ ಸಾಧುವಿನ ವಿಯೋಗ ದಿಂದ ಕೊಂಚ ದುಃಖಿತಳಾದರೂ ಪ್ರಪಂಚದ ಅಸ್ಥಿರತೆಯನ್ನು ನೆನೆದು ಮುಂದಿನ ಕಾರ್ಯಗಳನ್ನೆಲ್ಲ ನೆರವೇರಿಸಿದಳು.

ಮುಂದೆ ಕೆಲವು ದಿನಗಳಲ್ಲಿಯೇ ಅದೇ ಊರೊಳಗಿನ ಮೊಚ್ಚೆಗಾರ (ಮಾದಿಗ)ನ ಮನೆಯಲ್ಲಿ ಒಂದು ಗಂಡು ಕೂಸು ಹುಟ್ಟಿತು. ಹುಟ್ಟಿದ ಕೂಸು ಮೂರು ದಿನಗಳಾ ದರೂ ಅಳಲಿಲ್ಲ. ಹಾಲುಣಲಿಲ್ಲ. ಕೂಸಿನ ತಾಯಿತಂದೆಗಳು ದುಃಖಿತರಾದರು. ಅವರು ವೈದ್ಯರನ್ನು ಕರೆಸಿ ಕೇಳಿದರು. ಮಂತ್ರತಂತ್ರಗಾರರನ್ನು ಕರೆಯಿಸಿ ತೋರಿಸಿದರು. ಯಾತರಿಂದಲೂ ಏನೂ ಪ್ರಯೋಜನವಾಗಲಿಲ್ಲ. ಕೊನೆಗೆ ಅವರು ಸಾಧುವಿನ ಸಹ ವಾಸದಿಂದ ಜ್ಞಾನಿಯೆನಿಸಿಕೊಂಡಿದ್ದ ವೇಶ್ಯೆಯ ಬಳಿಗೆ ಹೋಗಿ ತಮ್ಮ ದುಃಖವನ್ನು ಹೇಳಿಕೊಂಡರು.

ಬಡವರು, ಶ್ರೀಮಂತರು, ಸುಗುಣಿಗಳು, ದುರ್ಗುಣಿಗಳು ಎಲ್ಲರೂ ಒಂದೇ ಎಂದು ತಿಳಿದಿರುವ ಪರೋಪಕಾರವ್ರತಿಯಾದ ವೇಶ್ಯೆಯು ಮಾದಿಗನ ಮನೆಗೆ ಬಂದು ಶಿಶುವನ್ನು ನೋಡಿ ತನ್ನ ಜ್ಞಾನದೃಷ್ಟಿಯಿಂದ ಪೂರ್ವಾಪರಗಳನ್ನೆಲ್ಲ ತಿಳಿದು ಕಣ್ಣೀರು ಸುರಿಸತೊಡ ಗಿದಳು. ನೆರೆದವರೆಲ್ಲರು ನೋಡುತ್ತಿರಲು ಆ ಶಿಶುವನ್ನು ಎತ್ತಿಕೊಂಡು "ಮಹಾಪುರು ಷನೇ, ಸಂಸರ್ಗದೋಷದಿಂದ ನಿನ್ನ ಮಲಿನವಾದ ಭಾವನೆಯನ್ನು ಬಿಟ್ಟುಬಿಡು. ಮಾದಿ ಗನ ಮನೆಯಲ್ಲಿ ಹೇಗೆ ಬಾಳುವೆ ಮಾಡಲೆಂದು ಈಗ ಯೋಚಿಸಿ ಫಲವೇನು? ಪೂರ್ವ ಜನ್ಮದ ವಾಸನಾಬಲದಿಂದ ಉಂಟಾಗಿರುವ ಈ ಮಾದಿಗರ ಜನ್ಮವನ್ನು ನೀನು ಯಥಾ ರೀತಿಯಾಗಿ ಅನುಭವಿಸಲೇ ಬೇಕು. ಇದು ನಿನಗೆ ಬಿಡದ ಕರ್ಮವೆಂಬದನ್ನು ಲಕ್ಷದ ಲ್ಲಿಟ್ಟು ಸನ್ಮಾರ್ಗದಿಂದ ನಡೆದು ನಿನ್ನ ಉದ್ಧಾರದ ಮಾರ್ಗವನ್ನು ಕಂಡುಕೊಳ್ಳುವದರ ಹೊರತು ಅನ್ಯ ಉಪಾಯುವೇ ಇಲ್ಲ." ಎಂದು ನುಡಿದು ಮಗುವನ್ನು ತಿರುಗಿ ತಾಯಿಯ ಕೈಗೆ ಕೊಟ್ಟಳು. ಕೂಸು ಹಾಲುಂಡಿತು. ವೇಶ್ಯೆಯು ತನ್ನ ಕುಟೀರಕ್ಕೆ ನಡೆದಳು.

ನಿರ್ಯಾಣಕಾಲದಲ್ಲಿ ಪಾದರಕ್ಷೆಯಲ್ಲಿ ಆಸಕ್ತಿಯುಂಟಾದ ದೋಷಕ್ಕಾಗಿ ಮಾದಿ ಗರಲ್ಲಿ ಹುಟ್ಟಿದ ಸಾಧುವು ಆ ಜನ್ಮದ ಕಷ್ಟನಷ್ಟಗಳನ್ನೆಲ್ಲ ಯಥಾರೀತಿಯಾಗಿ ಅನು ಭವಿಸಿ ಸನ್ಮಾರ್ಗದಿಂದ ನಡೆದು ತನ್ನ ಉದ್ಧಾರಮಾರ್ಗವನ್ನು ಕಂಡುಕೊಂಡನು.

**ಸಾಂ॥ ಹಿಂದೆ ಗಳಿಸಿದ ದ್ರವ್ಯಸಂಚಯುವನೊಂದೊಂದೆ।**
**ಯಿಂದು ನೀನುಪಭೋಗಿಪಂತೆ ॥**
**ಹಿಂದೆ ಮಾಡಿದ ಕರ್ಮಸಂಚಯುದ ಪ್ರತಿಫಲವ।**
**ನಿಂದು ನೀನುಪಭೋಗಿಸುವದು ॥ ೧ ॥**

ಭಗವಾನ್

# ಶ್ರೀರಾಮಕೃಷ್ಣ ಪರಮಹಂಸರು.

ಭಾ. ಷ. ಇಳೆಯೊಳೆಂದೆಂದೆಮ್ಮ ಧರ್ಮದ ।
ಕಳೆಯಿಳಿದು ಬೆಳೆಯುವದಧರ್ಮವು ।
ಇಳಿದು ಬಂದುದ್ಧರಿಪೆನೆಂದಂದೀ ಧರಿತ್ರಿಯಲಿ ॥



ಜನನ :—ವಂಗಾಬ್ದ ೧೨೪೨ನೇ ಫಾಲ್ಗುಣ ಶುಕ್ಲಪಕ್ಷ ದ್ವಿತೀಯೆ.
ನಿರ್ಯಾಣ :—ವಂಗಾಬ್ದ ೧೨೯೩ನೇ ಶ್ರಾವಣ ವದ್ಯ ಷಷ್ಠಿ.

ವಾಗ್ಭೂಷಣ ಅಗಸ್ಟ ೧೯೨೪.

K. V. P. D.

## ೪೫. ನಿಜವಾದ ಬ್ರಾಹ್ಮಣನು.





ವಿಂಧ್ಯಗಿರಿಯ ಶಿಖರದಲ್ಲೊಂದು ಕಡೆಯಲ್ಲಿ ದಟ್ಟವಾಗಿ ಬೆಳೆದಿರುವ ಕಾರಡವಿಯ ಮಧ್ಯದಲ್ಲಿ **ಗೌತುಮ**ನೆಂಬ ಮುನಿವರನೊಬ್ಬನು ವಾಸವಾಗಿದ್ದನು. ಆ ಪರ್ಣಕುಟೀರವಾಸಿಯಾದ ಮುನಿವರನು ಯಾವಾಗಲೂ ದೇವತಾಧ್ಯಾನದಲ್ಲಿ ಮಗ್ನನಾಗಿರುವನು. ಹಲವರು ಶಿಷ್ಯರು ಬ್ರಹ್ಮವಿದ್ಯೆಯನ್ನು ಅಭ್ಯಾಸಿಸುವದಕ್ಕಾಗಿ ಆತನನ್ನು ಬಹುಕಾಲದಿಂದ ಆಶ್ರಯಿಸಿದ್ದರು. ಗೌತುಮನು ದಿನಾಲು ಪಂಚಪಂಚ ಉಷಃಕಾಲದಲ್ಲಿ ಎದ್ದು, ಪುಣ್ಯಸಲಿಲವಾಹಿನಿಯಾದ ನರ್ಮದೆಯಲ್ಲಿ ಮಿಂದು ದೇವತಾಧ್ಯಾನದಲ್ಲಿ ಮಗ್ನನಾಗುವನು. ಬಳಿಕ ತುಸುಹೊತ್ತು ತನ್ನ ಶಿಷ್ಯವೃಂದವನ್ನು ಕೂಡ್ರಿಸಿಕೊಂಡು ಅವರಿಗೆ ಬ್ರಹ್ಮವಿದ್ಯೋಪದೇಶಮಾಡುವನು. ಬಳಿಕ ಪುನಃ ಸ್ನಾನಮಾಡಿ ಮಧ್ಯಾಹ್ನದ ಆಹ್ನಿಕಗಳನ್ನು ತೀರಿಸಿಕೊಂಡು ಶಿಷ್ಯರು ಒದಗಿಸಿದ್ದ ಫಲಾಹಾರವನ್ನು ಸೇವಿಸಿ ಪುನಃ ತುಸುವೇಳೆಯನ್ನು ಬ್ರಹ್ಮವಿದ್ಯಾಚರ್ಚೆಯಲ್ಲಿ ಕಳೆಯುವನು. ಸಾಯಂಕಾಲದಲ್ಲಿ ಮತ್ತೆ ಸ್ನಾನಸಂಧ್ಯಾದಿ ನಿತ್ಯಕರ್ಮಗಳನ್ನು ನೆರವೇರಿಸುವನು. ದೇವತಾ ಉಪಾಸನೆ ಶಿಷ್ಯರಿಗೆ ಉಪದೇಶಮಾಡುವದು ಇವುಗಳ ಹೊರತು ಆತನಿಗೆ ಅನ್ಯ ಉಪಾಧಿಗಳೇ ಇರಲಿಲ್ಲ.

ಒಂದುದಿನ ಪ್ರಾತಃಕಾಲದಲ್ಲಿ ಗೌತುಮ ಮುನಿಯು ಸ್ನಾನಾದಿ ನಿತ್ಯಕರ್ಮಗಳನ್ನು ತೀರಿಸಿಕೊಂಡು ತನ್ನ ಶಿಷ್ಯವೃಂದದೊಡನೆ ಬ್ರಹ್ಮವಿದ್ಯಾಚರ್ಚೆಯಲ್ಲಿ ತೊಡಗಿದಾಗ ಒಬ್ಬ ತರುಣನು ಬಂದು ತಾನು ತಂದಿರುವ ಫಲಪುಷ್ಪಗಳನ್ನು ಮುಂದಿಟ್ಟು ಭಕ್ತಿಯಿಂದ ಮುನಿವರನನ್ನು ವಂದಿಸಿ ನಿಂತುಕೊಂಡನು. ಶಿಷ್ಯರು ಆತನನ್ನು ನೋಡಿ ಇವನಾರು, ಇಲ್ಲಿಗೇತಕ್ಕೆ ಬಂದಿರುವನು, ಎಂಬ ವಿಚಾರಗಳಲ್ಲಿ ತೊಡಗಿಕೊಂಡು ತಮ್ಮ ಅಧ್ಯಯನ ಕಾರ್ಯವನ್ನು ನಿಲ್ಲಿಸಿ ಸುಮ್ಮನೆ ಕುಳಿತಿದ್ದರು. ಗೌತುಮಮುನಿಯು ಆಗಂತುಕನನ್ನು ಕುರಿತು—ತಮ್ಮಾ ನೀನಾರು? ಇಲ್ಲಿಗೆ ಬರಲು ಕಾರಣವೇನು? ಎಂದನು.

ಆಗಂತುಕ:—ನಾನೊಬ್ಬ ಅನಾಥನು. ನನಗೆ ಬ್ರಹ್ಮವಿದ್ಯಾಭ್ಯಾಸ ಮಾಡಬೇಕೆಂದು ಅಭಿಲಾಷೆಯುಂಟಾಗಿದೆ. ಇಲ್ಲಿಗೆ ತುಸು ದೂರದಲ್ಲಿರುವ ಹಳ್ಳಿಯು ನನ್ನ ವಾಸಸ್ಥಳವು. ತಮ್ಮ ಸನ್ನಿಧಿಯಲ್ಲಿ ಬಹುಜನ ಶಿಷ್ಯರು ವಿದ್ಯಾಭ್ಯಾಸಮಾಡುತ್ತಿರುವದನ್ನು ತಿಳಿದು ಇಲ್ಲಿಗೆ ಬಂದಿರುವೆನು. ಮಹಾಮಹಿಮರಾದ ತಾವು ಅನುಗ್ರಹಿಸಿ ಈ ದೀನನ ಕೋರಿಕೆಯನ್ನು ಪೂರೈಸಬೇಕೆಂದು ಪ್ರಾರ್ಥಿಸುವೆನು.

ಗೌತುಮ:—ತಮ್ಮಾ, ಒಳ್ಳೆಯದಾಯಿತು. ನನಗೆ ಈಶ್ವರಚಿಂತನೆ ಶಿಷ್ಯರಿಗೆ ಉಪದೇಶ ಮಾಡುವದು ಇವುಗಳ ಹೊರತು ಅನ್ಯವ್ಯಾಸಂಗಗಳೇ ಇಲ್ಲ. ಇಲ್ಲಿ ಅನೇಕರು

ವಿದ್ಯಾರ್ಥಿಗಳಿರುವರು. ಇವರೊಡನೆ ನೀನೂ ಇರಬಹುದು. ಆದರೆ ನಮ್ಮಲ್ಲಿ ಒಂದು ನಿಯಮವುಂಟು. ಅದಕ್ಕೆ ನೀನು ಒಳಗಾಗಿದ್ದರೆ ಮಾತ್ರ ನಾನು ನಿನಗೆ ಬ್ರಹ್ಮವಿದ್ಯೆಯನ್ನು ಉಪದೇಶಮಾಡಲಿಕ್ಕೆ ಅಡ್ಡಿಯಿಲ್ಲ.

ಆಗಂತುಕ:—ಸ್ವಾಮೀ, ತಾವು ವಿಧಿಸುವ ಸಕಲ ನಿಯಮಗಳನ್ನೂ ಅಕ್ಷರಶಃ ಅನುಸರಿಸಿ ನಡೆಯುವೆನು. ನನ್ನ ನಡತೆಯಲ್ಲಿ ಎಳ್ಳಷ್ಟೂ ಕುಂದು ಕೊರತೆಗಳುಂಟಾಗಲಾರವು.

ಗೌತಮ:—ತಮ್ಮಾ, ನಿನ್ನ ನಡತೆಯ ವಿಷಯವಾಗಿ ನಾನು ಮಾತಾಡಲಿಲ್ಲ. ನಿನ್ನನ್ನು ನೋಡಿದರೆ ಬ್ರಾಹ್ಮಣನಂತೆ ತೋರುತ್ತಿರುವೆಯಾದರೂ ಅದನ್ನು ಕೇಳಿ ತಿಳಿದುಕೊಳ್ಳದೆ ಇರಲಾರೆನು. ನಮ್ಮಲ್ಲಿ ಬ್ರಾಹ್ಮಣರಲ್ಲದವರಿಗೆ ವಿದ್ಯಾಭ್ಯಾಸಕ್ಕೆ ಅನುವು ದೊರೆಯಲಾರದು. ಬ್ರಾಹ್ಮಣೇತರರಿಗೆ ಬ್ರಹ್ಮ ವಿದ್ಯೋಪದೇಶ ಮಾಡುವದು ಧರ್ಮದಿಂದ ನಿಷಿದ್ಧವಾಗಿರುವದು. ಆದುದರಿಂದ ನಿನ್ನ ಕುಲಗೋತ್ರಗಳನ್ನು ಮೊದಲು ಹೇಳು.

ಆಗಂತುಕನು:—ತಲೆಯನ್ನು ತಗ್ಗಿಸಿ ಕ್ಷಣಹೊತ್ತು ಸುಮ್ಮನೆ ನಿಂತುಕೊಂಡನು. ಬಳಿಕ "ಸ್ವಾಮೀ, ಇದು ನನಗೆ ತಿಳಿಯದ ವಿಷಯವು. ಇಲ್ಲಿಯೇ ನೆರೆಯ ಹಳ್ಳಿಯಲ್ಲಿ ನಮ್ಮ ತಾಯಿಯಿರುವಳು. ಅವಳ ಬಳಿಗೆ ಹೋಗಿ ಎಲ್ಲವನ್ನೂ ಸರಿಯಾಗಿ ಕೇಳಿ ತಿಳಿದುಕೊಂಡು ಬರುವೆನು. ತಮ್ಮ ಧರ್ಮಕ್ಕೆ ಬಾಧೆಬರುವಂತೆ ನಡೆಯಬೇಕೆಂದು ನಾನೆಂತು ಕೇಳಿಕೊಳ್ಳಲಿ! ನಾಳೆಯೇ ತಾಯಿಯಿಂದ ಎಲ್ಲ ಸಂಗತಿಗಳನ್ನು ತಿಳಿದುಕೊಂಡು ಬರುವೆನು." ಎಂದು ನುಡಿದು ಮುನಿವರನನ್ನು ವಂದಿಸಿ ಮನೆಗೆ ತಿರುಗಿದನು.

ಆ ಗುರುಶಿಷ್ಯರ ಅಧ್ಯಾಪನ ಅಧ್ಯಯನ ಕಾರ್ಯಗಳು ಯಥಾರೀತಿ ನಡೆದವು.

ತರುಣನು ವಿಂಧ್ಯಗಿರಿಯ ಸುಂದರವಾದ ವನಶೋಭೆಯನ್ನು ನಿರೀಕ್ಷಿಸುತ್ತ ನರ್ಮದಾ ತೀರಕ್ಕೆ ಬಂದನು. ನದಿಯ ದಂಡೆಯಲ್ಲಿರುವ ಹಳ್ಳಿಯ ನೋಟಗಳನ್ನು ನೋಡುತ್ತ ಕೃಶಾಂಗಿಯಾದ ಜಲದೇವತೆಯು ಒಂದು ಮಗ್ಗಲಲ್ಲಿ "ಜುಳು ಜುಳು" ಗಾನದೊಡನೆ ಮಂದಗಾಮಿನಿಯಾಗಿರಲು ವಿಶಾಲವಾದ ಉಸುಕಿನ ರಾಶಿಯಿಂದಲೂ ತರತರದ ಬೆನಕಗಳಿಂದಲೂ ಒಪ್ಪುತ್ತಿರುವ ಪಾತ್ರದಲ್ಲಿ ಸಾವಕಾಶವಾಗಿ ನಡೆಯತೊಡಗಿದನು. ಮಧ್ಯಾಹ್ನವಾಗಲು ಒಂದೆಡೆಯಲ್ಲಿರುವ ಮಡುವಿನಲ್ಲಿ ಮಿಂದು ಬಟ್ಟೆಗಳನ್ನೊಗೆದುಕೊಂಡು ತಾನು ತಂದಿರುವ ಕಂದಮೂಲಗಳನ್ನು ತಿಂದು ಕೊಂಚವಿಶ್ರಮಿಸಿಕೊಂಡು ಪುನಃ ತನ್ನ ಪ್ರಯಾಣವನ್ನು ಮುಂದೆ ಸಾಗಿಸಿದನು. ಸುಮಾರು ಮಧ್ಯರಾತ್ರಿಯ ಸುಮಾರಕ್ಕೆ ತನ್ನ ಹಳ್ಳಿಯನ್ನು ಸೇರಿದನು. ಊರ ಜನರೆಲ್ಲರೂ ನಿದ್ರಾದೇವಿಯ ಆಶ್ರಯದಲ್ಲಿ ತಮ್ಮ ಪ್ರಪಂಚದ ಸುಖದುಃಖಗಳನ್ನೆಲ್ಲ ಮರೆತು ಬಿಟ್ಟು ವಿಶ್ರಾಂತಿಯನ್ನು ಹೊಂದುತ್ತಿದ್ದರು. ತರುಣನು ತನಗೆ ಚಿರಪರಿಚಿತವಾದ ಎರಡೂ ಮಗ್ಗಲು ಗಿಡ

ಗಂಟೆಗಳಿಂದ ಮುಚ್ಚಿ ಹೋದಂತಿರುವ ಕಾಲುದಾರಿಯಿಂದ ಹಳ್ಳಿಯನ್ನು ಸೇರಿ ಮುಂದೆ ಸಾಗಿ ತನ್ನ ಚಿಕ್ಕ ಗುಡಿಸಲವನ್ನು ಸೇರಿದನು. ಮುದುಕಿ ತಾಯಿಯು ಮನೆಯ ಮೂಲೆಯೊಳಗಿನ ಚಿಕ್ಕ ಪಣತೆಯೊಳಗೆ ಮಿಣಿ ಮಿಣಿ ಮಿಣುಕುತ್ತಿದ್ದ ಚಿಕ್ಕ ಹರಳೆಣ್ಣೆಯ ದೀಪದ ಬೆಳಕಿನಲ್ಲಿ ತನ್ನ ಮುದ್ದು ಮಗನ ದಾರಿಯನ್ನೇ ನೋಡುತ್ತ ಕುಳಿತಿದ್ದಳು. ಮಗನು ಬಾಗಿಲ ಬಳಿಗೆ ಬಂದು " ಅವ್ವಾ " ಎಂದು ಕರೆಯಲು ತಟ್ಟನೆ ಎದ್ದು ಬಂದು ಬಾಗಿಲು ತೆರೆದಳು. ಮಗನು ಮನೆಯೊಳಗೆ ಹೋದನು.

ತಾಯಿ:—ಮಗೂ, ಸತ್ಯಕಾಮಾ, ಎಲ್ಲಿಗೆ ಹೋಗಿದ್ದೆಯಪ್ಪಾ, ಎಷ್ಟು ರಾತ್ರಿಯಾಯಿತು ? ಮಧ್ಯಾಹ್ನ ಎಲ್ಲಿ ಊಟ ಮಾಡಿದೆ ? ಅಗೋ ನೋಡು, ಅಷ್ಟಮಿಯ ಚಂದ್ರನು ಈಗಾಗಲೇ ಅಸ್ತನಾದನು.

ಸತ್ಯಕಾಮ:—ಅವ್ವಾ, ನಾನು ಈಹೊತ್ತು ಇಲ್ಲಿಯೇ ಅಡವಿಯಲ್ಲಿರುವ ಗೌತುಮ ಋಷಿಗಳ ಆಶ್ರಮಕ್ಕೆ ಹೋಗಿದ್ದೆನು.

ತಾಯಿ:—ಯಾಕೆ? ಅಲ್ಲೇನು ಕೆಲಸವಿದ್ದಿತು?

ಸತ್ಯಕಾಮ:—ಆ ಮಹಾತ್ಮರ ಆಶ್ರಮವನ್ನು ನಾನು ಇನ್ನೂ ನೋಡಿರಲಿಲ್ಲ. ಅಲ್ಲಿ ಅನೇಕ ವಿದ್ಯಾರ್ಥಿಗಳು ದೂರದೂರ ದೇಶಗಳಿಂದ ಬಂದು ಬ್ರಹ್ಮವಿದ್ಯಾಭ್ಯಾಸ ಮಾಡುತ್ತಿರುವರು. ತಪೋವನವು ಅತ್ಯಂತ ರಮಣೀಯವಾಗಿರುವದು.

ತಾಯಿ:—ನಿನಗೆ ಅಲ್ಲಿ ಏನು ಕೆಲಸವಿದ್ದಿತು.

ಸತ್ಯಕಾಮ:—ನಾನೂ ಆ ಮಹಾತ್ಮರ ಬಳಿಯಲ್ಲಿ ಬ್ರಹ್ಮವಿದ್ಯಾಭ್ಯಾಸ ಮಾಡಬೇಕೆಂದು ಯೋಚಿಸಿ ಅಲ್ಲಿಗೆ ಹೋಗಿದ್ದೆನು.

ತಾಯಿ:—( ಮೆಲ್ಲಗೆ ) ಗೌತುಮ ಋಷಿಗಳು ಏನೆಂದು ಅಪ್ಪಣೆಕೊಡಿಸಿದರು.

ಸತ್ಯಕಾಮನು ಗೌತುಮ ಋಷಿಯು ಹೇಳಿದ ಸಂಗತಿಯನ್ನೆಲ್ಲ ತಾಯಿಗೆ ತಿಳಿಸಿದನು. ತಾಯಿಯ ಕಣ್ಣುಗಳಿಂದ ನೀರು ಸುರಿಯುವದು ಆ ಮಿಣಿ ಮಿಣಿ ದೀಪದ ಬೆಳಕಿನಲ್ಲಿ ಸತ್ಯಕಾಮನಿಗೆ ಕಾಣಿಸಲಿಲ್ಲ.

ಸತ್ಯಕಾಮ:—ಅವ್ವಾ, ನಾವು ಯಾವ ಕುಲದವರು? ನಮ್ಮ ಗೋತ್ರವು ಯಾವದು? ನಾನು ನಾಳೆ ಮುಂಜಾನೆಯೇ ತಿರುಗಿ ಗೌತುಮ ಮುನಿಯ ಆಶ್ರಮಕ್ಕೆ ಬರುವೆನೆಂದು ಹೇಳಿ ಬಂದಿರುವೆನು.

ತಾಯಿ:—ಮಗೂ, ಮೊದಲು ಊಟಮಾಡು, ಆ ಬಳಿಕ ಎಲ್ಲವನ್ನೂ ನಿನಗೆ ಹೇಳುವೆನು.

ಸತ್ಯಕಾಮನು ತಾಯಿಯು ಕೊಟ್ಟ ನೀರಿನಿಂದ ಕೈ-ಕಾಲು-ಮೋರೆಗಳನ್ನು ತೊಳೆದುಕೊಂಡನು. ಬಳಿಕ ದೇವರನ್ನು ವಂದಿಸಿ ಊಟಕ್ಕೆ ಕುಳಿತನು. ಇತ್ತ ಊಟಮಾಡು

ತ್ತಿದ್ದರೂ ಸತ್ಯಕಾಮನ ಮನಸ್ಸು ಮಾತ್ರ ತನ್ನ ಕುಲಗೋತ್ರಗಳನ್ನು ತಿಳಿದುಕೊಳ್ಳುವ ವಿಚಾರದಲ್ಲಿಯೇ ತೊಡಗಿದ್ದಿತು. ಆದುದರಿಂದ ಅವನು ಮತ್ತೆ—"ಅಮ್ಮಾ ನಾವು ಯಾವ ಗೋತ್ರದವರು" ಎಂದನು.

ತಾಯಿ:—ಮಗೂ, ಏನೆಂದು ನಮ್ಮ ಕುಲಗೋತ್ರಗಳನ್ನು ಹೇಳಲಿ? ಸತ್ಯಕ್ಕೆ ಸಾವಿಲ್ಲ. ಅಸತ್ಯಕ್ಕೆ ಸುಖವಿಲ್ಲ. ತಮ್ಮಾ, ನಾನು ಕ್ಷತ್ರಿಯ ಕುಲದಲ್ಲಿ ಹುಟ್ಟಿದ್ದೆನು. ಇನ್ನೂ ಚಿಕ್ಕವಳಿರುವಾಗಲೇ **ಅವರು** ತೀರಿಕೊಂಡರು. ತಾಯಿತಂದೆಗಳನ್ನೂ ಕಳೆದುಕೊಂಡ ನಾನು ಪರದೇಶಿಯಾದೆನು. ಕಾಲಮಾನವು ಕಷ್ಟಸುಖಗಳ ಮಾನವನ್ನು ಲಕ್ಷಿಸುತ್ತಿರುವದಿಲ್ಲ. ನನಗೆ ತಾರುಣ್ಯವು ಬಂದಿತು. ರೂಪಕ್ಕೂ ಕೊರತೆಯಿರಲಿಲ್ಲ. ದಾರಿದ್ರ್ಯದ ಬಾಧೆಯನ್ನಂತೂ ಹೇಳಿ ತೀರುವಂತಿರಲಿಲ್ಲ. ಇಂತಹ ವಿಪನ್ನಾವಸ್ಥೆಯಲ್ಲಿ ಸಾಮಾನ್ಯ ಸ್ತ್ರೀಯರು ಯಾವ ಹಾದಿಯನ್ನು ಹಿಡಿಯುವರೋ ಅದೇ ಹಾದಿಯನ್ನೇ ನಾನೂ ತುಳಿದೆನು. ಮಗೂ, ವೈಧವ್ಯಜೀವನವು ಬಹು ಕಷ್ಟಕರವಾದುದು. ಅದರಲ್ಲಿಯೂ ನನ್ನಂಥ ಅನಾಥೆಯರಿಗೆ ತಮ್ಮ ಧರ್ಮರಕ್ಷಣೆಯನ್ನು ಮಾಡಿಕೊಳ್ಳುವದು ತುಂಬಾಕಷ್ಟಕರವಾದುದು. ಹೊಟ್ಟೆ ಬಟ್ಟೆಗಳ ಪಾಡಿಗೆ ಸಿಲುಕಿದ ನಾನು ಜಾರತ್ವದಿಂದ ಬಾಳುವೆಮಾಡುತ್ತಿರಲು ನೀನು ಹುಟ್ಟಿದೆ. ಅಂದಮೇಲೆ ನಿನ್ನ ಕುಲಗೋತ್ರಗಳನ್ನು ನಾನು ಏನೆಂದು ಹೇಳಲಿ. ಇದಕ್ಕೂ ಹೆಚ್ಚಿಗೆ ನನಗೆ ಏನೂ ತಿಳಿಯದು.

ಸತ್ಯಕಾಮನು ತಾಯಿಯ ಮಾತುಗಳನ್ನು ಕೇಳಿ ಕಣ್ಣೀರು ಸುರಿಸತೊಡಗಿದನು. ತಾಯಿಯೂ ಅತ್ತಳು.

ಮಾರನೆಯದಿನ ಮುಂಜಾನೆ ಸತ್ಯಕಾಮನು ತಾಯಿಯ ಅಪ್ಪಣೆಯನ್ನು ಪಡೆದು ಆಶೀರ್ವಾದವನ್ನು ಸ್ವೀಕರಿಸಿ ಗೌತಮ ಋಷಿಯ ಆಶ್ರಮಕ್ಕೆ ಹೊರಟನು.

ಗೌತಮ ಮುನಿಯು ತನ್ನ ಪರ್ಣಕುಟೀರದ ಮುಂಗಡೆಯಲ್ಲಿ ವಿಶಾಲವಾಗಿ ಬೆಳೆದಿರುವ ಬಿಲ್ವವೃಕ್ಷಗಳ ನೆರಳಿನಲ್ಲಿ ಕುಳಿತು ತನ್ನ ವಿದ್ಯಾರ್ಥಿಗಳಿಗೆ ಉಪದೇಶ ಮಾಡುತ್ತಿದ್ದನು. ಸತ್ಯಕಾಮನು ಮುಂದೆ ಬಂದು ಮುನಿವರನ ಪಾದಗಳಿಗೆ ಎರಗಿ ದೂರ ಸರಿದು ನಿಂತುಕೊಂಡನು. ಆತನ ಮುಖದ ಮೇಲೆ ಒಡೆದು ಮೂಡಿರುವ ಚಿಂತೆಯ ಲಕ್ಷಣಗಳನ್ನು ನಿರೀಕ್ಷಿಸಿ, ಗೌತಮನು "ಮಗೂ, ನಿಮ್ಮ ತಾಯಿಯು ಏನು ಹೇಳಿದಳಪ್ಪಾ? ನಿಮ್ಮ ಕುಲಗೋತ್ರಗಳು ಯಾವವಂತೆ?" ಎಂದನು.

ಸತ್ಯಕಾಮನು ದುಃಖದಿಂದ ಕಣ್ಣೀರು ಸುರಿಸುತ್ತ ತನ್ನ ತಾಯಿಯಿಂದ ತಿಳಿದು ಬಂದಿರುವ ಸಂಗತಿಗಳನ್ನೆಲ್ಲ ಒಂದುಳಿಯದಂತೆ ಹೇಳಿದನು. ಮತ್ತು ತನ್ನನ್ನು ಉದ್ಧಾರ ಮಾಡಬೇಕೆಂದು ಪುನಃ ಮುನಿಯ ಪಾದಕ್ಕೆ ಎರಗಿದನು.

ಕುಳಿತಿರುವ ಶಿಷ್ಯರು ಆಶ್ಚರ್ಯ ವ್ಯಸನ ಮುಂತಾದ ಮನೋಭಾವನೆಗಳಿಂದ ಗುರುಗಳನ್ನೂ ಸತ್ಯಕಾಮನನ್ನೂ ನೋಡುತ್ತಿದ್ದರು.

ಗೌತಮನು—" ತಮ್ಮಾ, ಅಂಜಬೇಡ. ನಿನ್ನ ಹೆಸರು ಸತ್ಯಕಾಮನೆಂದು ಹೇಳಿದೆಯಲ್ಲವೇ? ನೀನು ನಿಜವಾಗಿಯೂ ಸತ್ಯಕಾಮನೇ ಸರಿ. ನೀನು ಸತ್ಯಗೋತ್ರದ ಬ್ರಾಹ್ಮಣನು. ಸತ್ಯವೇ ಎಲ್ಲ ಸದ್ಗುಣಗಳಲ್ಲಿ ಮೇಲಾದ ಗುಣವು. ಸತ್ಯವೇ ಸುದ್ವಿಜನ ಲಕ್ಷಣವು. ಸತ್ಯವಸ್ತುಜ್ಞಾನಕ್ಕೆ ಸಾಧನವಾದ ಬ್ರಹ್ಮವಿದ್ಯೆಯನ್ನು ಸತ್ಯಭಕ್ತನಾದ ನಿನಗಲ್ಲದೆ ಇನ್ನಾರಿಗೆ ಬೋಧಿಸಲಿ? ಬಾ, ಇತ್ತ ಬಾ, ಮಗೂ, ಸತ್ಯವಿಲ್ಲದವನು ಬ್ರಾಹ್ಮಣ ಕುಲದಲ್ಲಿ ಹುಟ್ಟಿದ ಮಾತ್ರಕ್ಕೆ ಬ್ರಹ್ಮಜ್ಞಾನೋಪದೇಶಕ್ಕೆ ಅರ್ಹನಾಗಲಾರನು. ನಿನ್ನಂಥ ಸತ್ಯಪ್ರಿಯನಾದ ಸದ್ಭಕ್ತನು ಅಬ್ರಾಹ್ಮಣ್ಯದಲ್ಲಿ ಹುಟ್ಟಿರುವನೆಂದ ಮಾತ್ರಕ್ಕೆ ತ್ಯಾಜ್ಯನಾಗಲಾರನು. ಬ್ರಾಹ್ಮಣಿಕೆಯು ಕೇವಲ ಜನ್ಮದಿಂದ ಬರಲಾರದು. ಬ್ರಾಹ್ಮಣರಿಗೆ ಉಚಿತವಾದ ಆಚಾರ ವಿಚಾರಗಳಿಂದಲೇ ಜನ್ಮದಿಂದ ಬಂದ ಬ್ರಾಹ್ಮಣಿಕೆಯು ಸ್ಥಿರವಾಗುವದು. ಅಂತಹ ಸತ್ಯ ಸದಾಚಾರಗಳಿಲ್ಲದವನು ಬ್ರಾಹ್ಮಣ ಕುಲದಲ್ಲಿ ಹುಟ್ಟಿದ ಮಾತ್ರದಿಂದ ಬ್ರಹ್ಮಜ್ಞಾನವನ್ನು ಪಡೆಯಲು ಅರ್ಹನಾಗಲಾರನು. ಮನುಷ್ಯನು ಬ್ರಾಹ್ಮಣ ತಂದೆ ತಾಯಿಗಳಿಂದಲೇ ಆದರೂ ಹುಟ್ಟಿದಾಗ ಶೂದ್ರನಂತಿರುವನು. ಮುಂದೆ ತನ್ನ ಕರ್ಮದಿಂದ ಬ್ರಾಹ್ಮಣಿಕೆಯನ್ನು ಪಡೆಯುವನು. ಸನ್ಮಾರ್ಗವಿಲ್ಲದ ಬ್ರಾಹ್ಮಣರು ಜನಿವಾರದಿಂದ ಬ್ರಾಹ್ಮಣರು, ಇಷ್ಟೇ." ಎಂದು ನುಡಿದು ಅವನನ್ನು ತನ್ನ ಶಿಷ್ಯವರ್ಗದಲ್ಲಿ ಸೇರಿಸಿಕೊಂಡು ಬ್ರಹ್ಮಜ್ಞಾನವನ್ನು ಬೋಧಿಸತೊಡಗಿದನು.

ಸಾಂ॥ ಸತ್ಯವೇ ಸತ್ಕುಲದ ಲಕ್ಷಣವು ಲೋಕದೊಳ್ ।
ಸತ್ಯವೇ ಸುದ್ವಿಜರ ಗುಣವು ॥
ಸತ್ಯ ವಸ್ತುಜ್ಞಾನ ಸದ್ಬ್ರಹ್ಮವಿದ್ಯೆಯು ।
ಸತ್ಯಕಾಮರಿಗೆ ವಶವಹುದು ॥ ೧ ॥

## ೩೬. ಭಿಕ್ಷುಕನಲ್ಲಿ ಭಿಕ್ಷೆ.






ಕಪಾವನೆ ಗಂಗಾನದಿಯ ತೀರದಲ್ಲೊಂದುಕಡೆಯಲ್ಲಿ ಸಾಧುಶ್ರೇಷ್ಠನೊಬ್ಬನು ಈಶ್ವರಧ್ಯಾನಾಸಕ್ತನಾಗಿ ಕುಳಿತಿದ್ದನು. ಜಗತ್ತಿನ ನೇತ್ರದಂತಿರುವ ಸೂರ್ಯದೇವನು ಮೂಡಣಾಕಾಶದಲ್ಲಿ ಆದೇ ಉದಯನಾಗಿ ತನ್ನ ಹೊಂಬಣ್ಣದ ಕಿರಣಗಳಿಂದ ಜಗತ್ತಿಗೆ ಸುವರ್ಣದ ಕಾಂತಿಯನ್ನು ಬೀರುತ್ತಿದ್ದನು. ಪುಣ್ಯನದಿ ಗಂಗೆಯು ಎಂದಿನಂತೆ ಶಾಂತವಾಗಿ ಪ್ರವಹಿಸುತ್ತಿದ್ದಿತು.

ಇಂತಿರುವಾಗ ವೃದ್ಧನಾದ ಬ್ರಾಹ್ಮಣನೊಬ್ಬನು ಆ ಸಾಧುವಿನ ಬಳಿಗೆ ಬಂದು ನಮಸ್ಕಾರಮಾಡಿ ಕುಳಿತುಕೊಂಡನು. ಕೊಂಚ ಹೊತ್ತಾದ ಬಳಿಕ ಸಾಧುವು ಕಣ್ತೆರೆದು ನೋಡಿ ಬ್ರಾಹ್ಮಣಶ್ರೇಷ್ಠನೇ, ಇಲ್ಲಿಗೆ ಬರಲು ಕಾರಣವೇನು? ಎಂದನು.

ಬ್ರಾಹ್ಮಣ:—ಸ್ವಾಮೀ, ದಾರಿದ್ರ್ಯಜೀವನವು ಬಹು ಕಷ್ಟಕರವಾದುದು. ಪ್ರಪಂಚದೊಳಗಿನ ಮಿಕ್ಕ ಯಾವ ಕಷ್ಟವನ್ನೇ ಆಗಲಿ, ಸಹಿಸಬಹುದು. ಆದರೆ ಹೊಟ್ಟೆಬಟ್ಟೆಗಳಿಗಿಲ್ಲದ ಇಂತಹ ಕಷ್ಟಮಯ ಜೀವನವು ಮಾತ್ರ ನನ್ನ ವೈರಿಗಳಿಗೂ ಬೇಡ.

ಸಾಧು:—ಅಣ್ಣಾ, ಈ ಪ್ರಪಂಚವೇ ಕಷ್ಟಕ್ಕೆ ಕಾರಣವಾದುದು. ಸಂಸಾರವು ಸಾಗರದಂತಿರುವದು. ಅದರಲ್ಲಿ ಬಿದ್ದವರು ಬದುಕಿದ ಉದಾಹರಣೆಯೇ ಕಡಿಮೆ. ಈಶ್ವರಭಕ್ತಿಯೆಂಬ ಈಸಗುಂಬಳಕಾಯಿಯನ್ನು ಆಶ್ರಯಿಸಿದರೆ ಮಾತ್ರ ಆ ಸಾಗರವನ್ನು ಸುಲಭವಾಗಿ ಈಸಿ ಪಾರಾಗಬಹುದು. ನೀನು ದಾರಿದ್ರ್ಯದಿಂದ ಬಳಲುತ್ತಿರುವೆಯಾದ ಕಾರಣ ನಿನಗೆ ದಾರಿದ್ರ್ಯದಂಥ ಕಷ್ಟವು ಬೇರೊಂದಿಲ್ಲವೆನಿಸುವದು. ಸಂತಾನ, ಸಂಪತ್ತು, ಆರೋಗ್ಯ ಇವುಗಳಲ್ಲಿ ಯಾವದು ಇಲ್ಲದಿದ್ದರೂ ಸಂಸಾರಿಯಾದ ಮನುಷ್ಯನು ಸುಖಿಯಾಗಲಾರನು. ಇವೆಲ್ಲವೂ ಇದ್ದರೂ ಮರಣವೆಂಬ ಮಹಾವ್ಯಾಧಿಯೊಂದು ಯಾರನ್ನೂ ಬಿಡದೆ ಬೆನ್ನಟ್ಟಿ ನಿಂತಿರುವದು. ಮನಸ್ಸಿನ ಶಾಂತಿಯಿಲ್ಲದಿದ್ದರೆ ಯಾವದೂ ಇಲ್ಲ. ಅದೊಂದೇ ಇದ್ದರೆ ಎಲ್ಲವೂ ಉಂಟು.

ಬ್ರಾಹ್ಮಣ:—ಸ್ವಾಮೀ, ನನಗೆ ಇದೆಲ್ಲಾ ತಿಳಿಯದು. ನಾನು ತಮ್ಮನ್ನು ಬೇಡಲು ಬಂದಿರುವದನ್ನಷ್ಟು ಅನುಗ್ರಹಿಸಿ ನನ್ನನ್ನು ಉದ್ಧಾರಮಾಡಬೇಕು.

ಸಾಧು:—ಮಹಾರಾಯಾ, ನಿರ್ಧನನಾದ ನನ್ನನ್ನು ಏನು ಬೇಡಲು ಬಂದಿರುವೆ?

"ನನ್ನ ಈ ದಾರಿದ್ರ್ಯವನ್ನು ಪರಿಹರಿಸಿ ರಕ್ಷಿಸಬೇಕು!" ಎನ್ನುತ್ತ ಬ್ರಾಹ್ಮಣನು ತನ್ನ ಹರಕು ಕಂತೆಯನ್ನು ಆ ಸಾಧುವಿನ ಇದಿರಿಗೆ ಹಾಸಿ ಬೇಡಿಕೊಂಡನು.

ಸಾಧುವು ಬಳಿಯಲ್ಲಿದ್ದ ಒಡಕ ಕುಂಬಳ ಸೊಟ್ಟೆ (ತನ್ನ ಭಿಕ್ಷಾಪಾತ್ರೆ) ಯನ್ನು ತೋರಿಸಿ "ನನ್ನಲ್ಲಿ ಇದರ ಹೊರತು ಇನ್ನಾವ ಸಾಮಗ್ರಿಯೂ ಇರುವದಿಲ್ಲ. ಇಂತಹ ಸಿತಿಯಲ್ಲಿ ನಾನು ನಿನಗೆ ಏನನ್ನು ತಾನೇ ಕೊಡಲಿ?" ಎಂದನು.

ಬ್ರಾಹ್ಮಣನು ದುಃಖದಿಂದ—" ಸ್ವಾಮೀ, ನಾನೇನು ಹೇಳಲಿ? ನನಗೆ ಅತ್ಯಂತ ಆಶ್ಚರ್ಯವಾಗುತ್ತಿದೆ. ದಯಾನಿಧಿಯೆನಿಸುವ ಆ ಶ್ರೀಹರಿಯೇ ಕಪಟಿಯೋ ಅಥವಾ ತಾವು ನನ್ನೊಡನೆ ಪರಿಹಾಸಕ್ಕಾಗಿ ಕಪಟವಚನಗಳನ್ನಾಡುವಿರೋ ತಿಳಿಯದಾಗಿದೆ. ನಿನ್ನೆ ರಾತ್ರೆ ಕನಸಿನಲ್ಲಿ ಆ ದಯಾಮಯನು ಮೈದೋರಿ ಗಂಗಾತೀರದಲ್ಲಿ ಇಂತಹ ಸ್ಥಳ ದಲ್ಲಿ ಒಬ್ಬ ಸಾಧುಪುರುಷನು ಕುಳಿತಿರುವನು, ಅತನನ್ನು ಕೇಳಿಕೊಂಡರೆ ನಿನಗೆ ಬೇಕಾ ದಷ್ಟು ಸಂಪತ್ತನ್ನು ಕೊಡುವನು ಎಂದು ನುಡಿದು ಅದೃಶ್ಯನಾದನು. "ಎಂದನು.

ಸಾಧುಶ್ರೇಷ್ಠನು ನೊಸಲಲ್ಲಿ ಬೆರಳಿಟ್ಟು ಕ್ಷಣಹೊತ್ತು ವಿಚಾರಮಾಡಿ 'ಒಳ್ಳೆಯದು, ಇತ್ತ ಬಾ', ಎಂದು ಸಮೀಪದಲ್ಲಿರುವ ನದಿಯ ಉಸುಕಿನ ರಾಶಿಯ ಬಳಿಗೆ ಅತನನ್ನು ಕರೆ ದುಕೊಂಡು ಹೋಗಿ " ಇಲ್ಲಿಯೇ ಎಲ್ಲಿಯೋ ಹುಡುಕಿನೋಡು. ಮೊನ್ನೆ ನಾನು ಸ್ನಾನ ಮಾಡಿ ಬರುವಾಗ ಒಂದು ಉತ್ತಮತರದ ಮರಕತ ರತ್ನವನ್ನು ನೋಡಿದ್ದೆನು. ಅದರಿಂದ ನನಗೇನು ಪ್ರಯೋಜನವೆಂದು ಸುಮ್ಮನೆ ಹೋಗಿಬಿಟ್ಟಿದ್ದೆನು. ಅದು ನಿನಗೆ ದೊರೆಯ ಬಹುದು. ಹುಡುಕಿ ನೋಡಿ ಸಿಕ್ಕರೆ ತೆಗೆದುಕೊಂಡು ಹೋಗು. ಅದರಿಂದ ನಿನ್ನ ದಾರಿದ್ರ್ಯವಿಚ್ಛಿನ್ನವಾಗುವದು." ಎಂದು ನುಡಿದು ಪುನಃ ತನ್ನ ಸ್ಥಳಕ್ಕೆ ಬಂದು ಧ್ಯಾನಾಸಕ್ತನಾಗಿ ಕುಳಿತುಕೊಂಡನು.

ಬ್ರಾಹ್ಮಣನು ಬಹಳ ಹೊತ್ತು ಹುಡುಕಿ ಕೊನೆಗೆ ಒಂದು ಕಡೆಯಲ್ಲಿ ಬೆನಕಗಳ ಗುಂಪಿನಲ್ಲಿ ಹೊಳೆಯುತ್ತ ಬಿದ್ದಿರುವ ಮಹಾರತ್ನವನ್ನು ನೋಡಿ ಆನಂದಾತಿಶಯದಿಂದ ತಟ್ಟನೆ ಆರಿಸಿಕೊಂಡು ತಿರುತಿರಿಗಿಸಿ ನೋಡುತ್ತಿರಲು ಅವನ ಮನಸಿನಲ್ಲಿ ಇನ್ನೊಂದು ವಿಚಾರವುಂಟಾಯಿತು. ಇಂತಹ ಅಮೌಲ್ಯ ರತ್ನವನ್ನು ನೋಡಿಯೂ ಆ ಸಾಧುಶ್ರೇಷ್ಠನು ಇದನ್ನು ಯಾಕೆ ಬಿಟ್ಟುಹೋಗಿದ್ದಾನು? ಎಂಬ ವಿಚಾರವು ಅವನ ಹೃದಯದಲ್ಲಿ ಒಡೆದು ಮೂಡಿತು. ಅವನು ಅಲ್ಲಿಯೇ ಸಾಯುಂಕಾಲವಾಗುವ ವರೆಗೆ ಕುಳಿತು, ವಿಚಾರಮಾಡಿ ಬಳಿಕ ಸಾಧುವಿನ ಬಳಿಗೆ ಬಂದು ವಂದಿಸಿ " ಸ್ವಾಮೀ, ತಾವು ಹೇಳಿದ ಮರಕತ ರತ್ನವು ನನಗೆ ದೊರೆಯಿತು. ಆದರೆ ಅದರಿಂದ ನನಗೆ ನಿಜವಾದ ಸುಖವು ದೊರೆಯ ಲಾರದು. ತಾವು ಬಹು ಕಾಲದಿಂದ ಶ್ರಮಮಾಡಿ ದೊರಕಿಸಿರುವ ಮನಸ್ಸಿನ ಶಾಂತಿ ಯೆಂಬ ಅಗಣಿತವಾದ ಅತುಲ ಸಂಪತ್ತಿನಲ್ಲಿ ಒಂದು ಕಣವನ್ನು ನನಗೆ ದಯಪಾಲಿಸಿರಿ. ನನಗೆ ಅಷ್ಟೇ ಸಾಕು." ಎಂದು ನುಡಿದು ತಾನು ತಂದಿದ್ದ ಮರಕತ ಮಹಾ ರತ್ನವನ್ನು ನದಿಯ ನೀರಿಗೆ ಎಸೆದು ಅತನ ಪಾದಗಳನ್ನು ಹಿಡಿದು ಬೇಡಿಕೊಂಡನು.

ಸಾ೦॥ **ಹರಿಯಿತ್ತಮರಕತವ ಮಳಲರಾಶಿಯೊಳಿಟ್ಟೆ ।**
**ಹರಿಬಕುತನನು ಬೇಡಬಂದು ॥**
**ಮರುಳುತನದೆ ಮತ್ತೆ ಮರಕತವ ಪಡೆಯುವರೇ ।**
**ಸ್ಥಿರಸುಖದ ದಾರಿಯ ಮರೆತು ॥ ೧ ॥**

---

## ೩೭. ವಿಧವೆಗೆ ಪತಿಯು ದೊರೆತನು.






ಂದೂಗಳ ಪರಮ ಪವಿತ್ರಸ್ಥಳವೆನಿಸುವ ಗಂಗಾ ಯಮುನೆಗಳ ಸಂಗಮಸ್ಥಾನವಾದ ಪ್ರಯಾಗಕ್ಷೇತ್ರದಲ್ಲಿ ಒಂದು ದಿನ ಕವಿವರ ತುಲಸೀದಾಸನು ಕೈಯಲ್ಲಿ ಜಪಮಾಲೆಯನ್ನು ಹಿಡಿದು ಸಂಚಾರಕ್ಕೆ ಹೊರಟಿದ್ದನು. ಅವನು ಬರಬರುತ್ತ ನದೀತೀರದಲ್ಲಿರುವ ಸ್ಮಶಾನ ಭೂಮಿಗೆ ಬಂದನು. ಕೆಳಗೆ ಪುಣ್ಯಸಲಿಲವಾಹಿನಿಯು ಮಂದಗಮನದಿಂದ ವಹಿಸುತ್ತಿದ್ದಳು. ಆಚೆಯ ದಂಡೆಯ ಮೇಲೆ ಅಚ್ಚ ಹಸರುಬಣ್ಣದಿಂದೊಪ್ಪುವ ಪೈರು ಮನೋಹರವಾಗಿ ತೋರುತ್ತಿತ್ತು. ನದಿಯ ಮಳಲೊಡ್ಡಿನಲ್ಲಿ ಒಂದು ಕಡೆಗೆ ಕೆಲವು ಜನರು ಗುಂಪುಗೂಡಿ ನಿಂತಿದ್ದರು. ತುಲಸೀದಾಸನು ಅಲ್ಲೇನು ನಡೆದಿರುವದೋ ನೋಡಬೇಕೆಂದು ಮೆಲ್ಲನೆ ಆ ಕಡೆಗೆ ನಡೆದನು.

ನಡುವೆ ಕಟ್ಟಿಗೆಯನ್ನೊಟ್ಟಿ ಅದರ ಬಳಿಯಲ್ಲೊಂದು ಶವವನ್ನಿಟ್ಟು ಜನರು ಸುತ್ತುವರಿದು ನಿಂತಿದ್ದರು. ಆ ಶವದ ತಲೆಯ ಕಡೆಗೆ ಒಬ್ಬ ಸುಂದರಿಯಾದ ರಮಣಿಯು ತಲೆಯ ಕೂದಲುಗಳನ್ನು ಹರವಿಕೊಂಡು ಅಳುತ್ತ ಕುಳಿತಿದ್ದಳು. ಸನ್ನ್ಯಾಸಿವೇಶದಿಂದಿರುವ ತುಲಸೀದಾಸನು ಹತ್ತರ ಬರುವದನ್ನು ನೋಡಿದೊಡನೆ ಸುತ್ತುವರಿದ ಜನರು ಸರಿದು ನಿಲ್ಲಲು ಆಕೆಯು ಎದ್ದು ಸಾಷ್ಟಾಂಗನಮಸ್ಕಾರಮಾಡಿದಳು. ಆತನು “ದೇವರು ನಿನಗೆ ಒಳ್ಳೇದು ಮಾಡಲಮ್ಮಾ” ಎಂದು ಆಶೀರ್ವಾದ ಮಾಡಿದನು. ಆಗ ಅವಳು “ಸ್ವಾಮೀ, ಈ ಜಗತ್ತಿನಲ್ಲಿ ನನಗೆ ಇನ್ನಾವ ಒಳಿತಾಗುವದಿದೆ. ಇದಕ್ಕಿಂತಲೂ ಹೆಚ್ಚಿನ ಕಷ್ಟವಾದರೂ ಇನ್ನೇನು ಬರಬೇಕಾಗಿದೆ. ನನಗೆ ಪರಲೋಕದಲ್ಲಿ ಸುಖವಾಗಲೆಂದು ಆಶೀರ್ವದಿಸಿರಿ” ಎಂದಳು.

ತು. ದಾ:—ಪರಲೋಕದಲ್ಲಿ? ಅದೆಲ್ಲಿಗೆ ಹೋಗಬೆಕೆನ್ನುವೆಯಮ್ಮಾ! ನಿನ್ನನ್ನು ನೋಡಿದರೆ ಇನ್ನೂ ೨೦ ವರ್ಷಗಳಾದಂತೆ ತೋರುವದಿಲ್ಲ.

ಈ ಮಾತುಗಳನ್ನು ಕೇಳಿದ ಆ ರಮಣಿಯು ಕಣ್ಣೀರು ಸುರಿಸುತ್ತ “ಸ್ವಾಮೀ, ಸ್ತ್ರೀಯರಿಗೆ ಪತಿಯೇ ದೇವರು; ಆತನೊಬ್ಬನೇ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಬಿಟ್ಟಿರದ ಸಂಗಡಿಗನು. ನನ್ನ ಪತಿಯು ಪರಲೋಕದ ಹಾದಿಯನ್ನು ಹಿಡಿದಿರಲು ನಾನು ಇಲ್ಲಿ ಏನು ಮಾಡಲಿ? ನನಗೆ ಈ ಜಗತ್ತಿನಲ್ಲಿ ಇನ್ನಾರು ಆಶ್ರಯದಾತರಿದ್ದಾರೆ? ನನ್ನ ಸರ್ವ ಸುಖಗಳೂ ನನ್ನ ಸರ್ವ ಸಂಸಾರವೂ ಪತಿಯೇ ಸರಿ. ಆತನು ಹೋದ ಮೇಲೆ ನನಗೆ ಸುಖವೂ ಇಲ್ಲ. ಸಂಸಾರವೂ ಇಲ್ಲ.” ಎಂದಳು.

ತುಳಸೀದಾಸನು ಈ ಮಾತುಗಳನ್ನು ಕೇಳಿ ನಕ್ಕುಬಿಟ್ಟನು.

ನೆರೆದವರು ಆಶ್ಚರ್ಯದಿಂದ ಬೆಪ್ಪಾಗಿ ನಿಂತರು. ಪತಿಯ ಮರಣದಿಂದ ಕಣ್ಣೀರು ಸುರಿಸುತ್ತಿರುವ ಅಬಲೆಯ ದುಃಖದ ಪ್ರಲಾಪಗಳನ್ನು ಕೇಳಿ ನಗುವ ಈ ಕವಿಯಂಥ

ವನೋ ಎಂದು ಅವರೆಲ್ಲರೂ ಯೋಚಿಸುತ್ತಿದ್ದರು. ಹೆಣ್ಣು ಮಗಳು ತನ್ನ ಪತಿಯ ಶವದ ಬಳಿಯಲ್ಲಿ ಕುಳಿತು ಅಳಹತ್ತಿದಳು.

ಆಗ ತುಲಸೀದಾಸನು:—ತಂಗೀ, ಏಳು ಅಳಬೇಡಮ್ಮಾ; ಈ ಮಣ್ಣಿನ ಹೆಂಟೆಯಲ್ಲಿ ಇನ್ನೇನು ಉಳಿದಿದೆ? ಮನೆಗೆ ಹೋಗು. ನೀನು ಮೊದಲಿನಂತೆ ಸುಖವಾಗಿರು. ಇಂದಿಗೆ ಒಂದು ತಿಂಗಳು ತುಂಬುವದರೊಳಗಾಗಿ ನಿನ್ನ ಪತಿಯು ತಾನಾಗಿ ನಿನ್ನ ಮನೆಗೆ ಬರುವನು. ನನ್ನ ಮಾತಿನಲ್ಲಿ ವಿಶ್ವಾಸವಿರಲಿ. ಅಲ್ಲಿಯ ವರೆಗೆ ನಾನೂ ನಡು ನಡುವೆ ಬಂದು ನಿನ್ನ ಸುಖದುಃಖಗಳನ್ನು ನೋಡಿಕೊಳ್ಳುತ್ತಿರುವೆನು. ಸತ್ತವರಿಗಾಗಿ ಅತ್ತರೆ ಅತ್ತವರೂ ಮತ್ತೆ ಸಾಯುವದಿಲ್ಲವೇ ?

ನೆರೆದವರೊಡನೆ ತುಲಸೀದಾಸನು ಮುಂದಿನ ಕೆಲಸಗಳನ್ನು ನೆರವೇರಿಸಿ ಆ ಹೆಣ್ಣು ಮಗಳನ್ನು ಮನೆಗೆ ಕಳುಹಿಸಿ ತನ್ನ ಸ್ಥಳಕ್ಕೆ ನಡೆದನು.

ಅಂದಿನಿಂದ ತುಲಸೀದಾಸನು ದಿನಾಲು ಆಕೆಯ ಮನೆಗೆ ಒಂದು ಧರ್ಮೋಪದೇಶ ಮಾಡತೊಡಗಿದನು. ಜಗತ್ತಿನೊಳಗಿನ ಪರಮೇಶ್ವರನ ಲೀಲೆಗಳನ್ನೂ ಆತನ ಅಸ್ತಿತ್ವವನ್ನೂ ಅವಳಿಗೆ ಅರುಹಿದನು. ಮಹಾತ್ಮನ ಸದುಪದೇಶದಿಂದ ಆಕೆಯಲ್ಲಿ ಜ್ಞಾನೋದಯವಾಯಿತು. ಸರ್ವರಲ್ಲಿಯೂ ಪರಮಾತ್ಮನು ವಾಸವಾಗಿರುವನೆಂಬದನ್ನು ಆಕೆಯು ಅರಿತುಕೊಂಡಳು.

ನೆರೆಹೊರೆಯವರಲ್ಲಿ ಕೆಲವರು ಆಕೆಯ ಆನಂದವೃತ್ತಿಯು ದಿನದಿನಕ್ಕೆ ಹೆಚ್ಚು ಒಡೆದು ತೋರತೊಡಗಿದುದನ್ನು ನೋಡಿ ಕುಕಲ್ಪನೆಯನ್ನು ತಂದುಕೊಂಡರು. ಕೊನೆಗೆ ತುಲಸೀದಾಸನು ಹೇಳಿದ ತಿಂಗಳದ ಕೊನೆಯ ದಿನವು ಸಮೀಪಿಸಿತು. ಆಗ ಕೆಲವರು ಆಕೆಯ ಮನೆಗೆ ಬಂದು —“ ಏನಮ್ಮಾ, ಕವಿಯು ಹೇಳಿದಂತೆ ನಿನ್ನ ಪತಿಯು ತಿರುಗಿ ಬಂದನೇನು? ತಿಂಗಳಾಗಲಿಕ್ಕೆ ಇನ್ನೆಷ್ಟು ದಿನಗಳು ತಾನೇ ಉಳಿದಿವೆ? ” ಎಂದರು.

ಆಗ ಅವಳು—“ ಅಮ್ಮಾ, ಕವಿವರನ ಆಶೀರ್ವಚನಗಳಂತೆ ನನ್ನ ಪತಿಯು ನನಗೆ ದೊರೆತನು. ನಾನು ಸರ್ವದಾ ಆತನ ಸಹವಾಸದಲ್ಲಿ ಆನಂದದಿಂದ ಕಾಲ ಕಳೆಯುತ್ತಿದ್ದೇನೆ. ” ಎಂದಳು.

ನೆರೆದವರು “ ಎಲ್ಲಿದ್ದಾನೆ ತೋರು ” ಎಂದು ಆಶ್ಚರ್ಯದಿಂದ ನುಡಿದರು. “ ಆ ನನ್ನ ಪತಿಯು ನನ್ನ ಅಂತಃಕರಣದಲ್ಲಿ ವಾಸವಾಗಿದ್ದಾನೆ. ತುಲಸೀದಾಸನಂಥ ಮಹಾ ಪುರುಷರೇ ಆತನನ್ನು ತೋರಿಸಬಲ್ಲರು. ” ಎನ್ನಲು ಎಲ್ಲರೂ ತಿರುಗಿ ತಮ್ಮ ತಮ್ಮ ಮನೆಗಳಿಗೆ ಹೋದರು.

**ಸಾಂ॥ ಸತ್ತವರಿಗತ್ತರೆ ಅತ್ತವರು ಸಾಯರೆ ? ।**
**ಸತ್ತಮೇಲುಳಿಯುವದೇನು ? ॥**
**ಚಿತ್ತದಲ್ಲಿರುವ ಶ್ರೀ ಚಿನುಮಯನೆ ಪಾಲಕನು ।**
**ಸತ್ತರೂ ಬದುಕಿದರೂ ನಮಗೆ ॥ ೧ ॥**

## ೩೮. ಅರಸನೂ ಸನ್ಯಾಸಿಯೂ.





ಉನ್ನತವಾದ ಹಿಮನಗದ ಒಂದು ಶಿಖರದ ಅಂಚಿನಲ್ಲಿ ಪುಣ್ಯನದಿ ಗಂಗೆಯು ಶಿವನ ಜಟೆಯಿಂದ ಭೂಲೋಕಕ್ಕೆ ದುಮ್ಮಿಕ್ಕುವಳೋ ಎಂಬಂತೆ ಭೋರ್ಗರೆಯುತ್ತ ಇಳಿದು ಬರುತ್ತಿರುವಳು. ಕೆಳಗೆ ದುಮ್ಮಿಕ್ಕಿದ ಆ ಜಲರಾಶಿಯು ಮುಂದೆ ವಿಶಾಲವಾದ ಪಾತ್ರದಲ್ಲಿ ಸೆಳವಿಲ್ಲದೆ ಮಂದಮಂದವಾಗಿ ಹರಿಯುತ್ತಿರುವದು. ಎಡಗಡೆಗೆ ಕಡಿದಾದ ಪರ್ವತಭಾಗವೂ ದಟ್ಟಡವಿಯೂ ಬಲಗಡೆಗೆ ಸವನೆಲದ ಕಾರಡವಿಯೂ ಆ ಪುಣ್ಯಪ್ರವಾಹವನ್ನು ಮುಸುಕಿರುವವು. ಎತ್ತರವಾದ ಬಂಡೆಗಲ್ಲುಗಳೂ ಗಗನಚುಂಬಿತಗಳಾದ ವೃಕ್ಷರಾಶಿಗಳೂ ಆ ನಿರ್ಮಲವಾದ ಜಲದಲ್ಲಿ ಪ್ರತಿಬಿಂಬಿತವಾಗಿ ಅದರ ಪುಟ್ಟ ಪುಟ್ಟ ಅಲೆಗಳೊಡನೆ ಅಲೆದಾಡುವಂತೆ ತೋರುವವು.

ಇಂತೊಪ್ಪುವ ಆ ಅರಣ್ಯಪ್ರದೇಶದಲ್ಲಿ ಆ ಪುಣ್ಯನದಿಯ ತೀರದಲ್ಲಿ ಕಡಿದಾದ ಬಂಡೆಗಲ್ಲಿನ ಮೇಲೆ ಬೌದ್ಧ ಸನ್ಯಾಸಿಯೊಬ್ಬನು ಯಾವದೋ ಒಂದು ಗ್ರಂಥದ ತಾಡವಾಲೆಗಳ ಪುಟಗಳನ್ನು ತಿರುತಿರುವಿ ನೋಡುತ್ತ ಕುಳಿತಿದ್ದನು. ಆಗ ಆತನ ಶಿಷ್ಯನೊಬ್ಬನು ಒಳಗೆ ಬಂದು “ಸ್ವಾಮೀ, ಮಹಾರಾಜರು ತಮ್ಮ ದರ್ಶನಾಪೇಕ್ಷೆಯಿಂದ ಬಂದಿರುವರು.” ಎಂದನು. ಒಡನೆಯೇ ಅಮೌಲ್ಯ ವಸ್ತ್ರಾಭರಣಗಳಿಂದ ಒಪ್ಪುತ್ತಿರುವ ಅರಸುಕುಮಾರನು ಮುಂದೆ ಬಂದು ಸನ್ಯಾಸಿಯನ್ನು ವಂದಿಸಿ ತಾನು ತಂದಿರುವ ಎರಡು ಅಮೌಲ್ಯ ರತ್ನಖಚಿತವಾದ ಬಳೆಗಳನ್ನು ಆತನ ಮುಂದಿರಿಸಿ ಹಿಂಜರಿದು ಕುಳಿತುಕೊಂಡನು. ಸನ್ಯಾಸಿಯು ತಾನು ಓದುತ್ತಿದ್ದ ಗ್ರಂಥದ ಒಂದೆರಡು ಪುಟಗಳನ್ನು ಓದಿ ಮುಗಿಸಿಕೊಂಡು ಅರಸನನ್ನು ಕುರಿತು ಕ್ಷೇಮಸಮಾಚಾರದ ವಾರ್ತೆಗಳನ್ನು ಕೇಳತೊಡಗಿದನು. ದೇಶದ ಸುಖಸಂಪತ್ತುಗಳ, ಬೌದ್ಧಧರ್ಮಪ್ರಸಾರದ, ತನ್ನ ರಾಜ್ಯದ ಕ್ಷೇಮಲಾಭಗಳ ಸಂಗತಿಗಳನ್ನೆಲ್ಲ ಮಾತಾಡಿದ ಬಳಿಕ ಅರಸನು—“ಸ್ವಾಮೀ, ನಾನು ಈ ಎರಡು ಬಳೆಗಳನ್ನು ಬಹುದಿನ ಶ್ರಮಪಟ್ಟು ದೊರಕಿಸಿರುವೆನು. ಅನೇಕ ದೇಶಗಳಿಗೆ ಹೋಗಿ ಬರುತ್ತಿದ್ದ ನನ್ನ ದೇಶದೊಳಗಿನ ಪ್ರಸಿದ್ಧ ವ್ಯಾಪಾರಿಗಳಲ್ಲೆಲ್ಲ ಶೋಧಿಸಿ ಶೋಧಿಸಿ ಅನೇಕ ಅಮೌಲ್ಯ ರತ್ನಗಳನ್ನು ದೊರಕಿಸಿಕೊಂಡು, ದೇಶದಲ್ಲೆಲ್ಲ ಪ್ರಸಿದ್ಧನಾದ ಸೊನ್ನೆಗಾರನಿಂದ ಈ ಬಳೆಗಳನ್ನು ಬಹು ಸುಂದರವಾಗಿ ಕೆಚ್ಚಿಸಿರುವೆನು. ಇಂತಹ ಅಮೌಲ್ಯವಾದ ವಸ್ತುವನ್ನು ತಮ್ಮಂತಹ ಮಹಾತ್ಮರಿಗಲ್ಲದೆ ಇನ್ನಾರಿಗೆ ಅರ್ಪಿಸಲೆಂದು ಯೋಚಿಸಿ ತಮ್ಮ ಸನ್ನಿಧಿಗೆ ತಂದಿರುವೆನು. ದಯವಿಟ್ಟು ಸ್ವೀಕರಿಸಿ ನನ್ನ ಮನೋಭೀಷ್ಟವನ್ನು ಪೂರೈಸಬೇಕು.” ಎಂದನು.

ಸನ್ಯಾಸಿಯು ತುಸು ಹೊತ್ತು ಸುಮ್ಮನೆ ಕುಳಿತು, “ಮಹಾರಾಯಾ, ಈ ಬಳೆಗಳು ಬಹಳ ಸುಂದರವಾಗಿವೆ. ನಿನ್ನಂತಹ ಮಹಾರಾಜನಿಗೇ ಇದು ಒಪ್ಪುವದು.” ಎಂದನು.

ಅರಸು:—ಸ್ವಾಮೀ, ತಾವು ಹೇಳುವ ಮಾತು ನಿಜ. ಆದರೆ ತಮಗೆ ಇದರಿಂದ ಪ್ರಯೋಜನವಿಲ್ಲದೆ ಇದ್ದರೂ ನಾನು ನನ್ನ ಮನಸ್ಸಿನ ತೃಪ್ತಿಗಾಗಿ ಇದನ್ನು ತಮಗೆ ಅರ್ಪಿಸಿರುವೆನು. ದಯವಿಟ್ಟು ಸ್ವೀಕರಿಸಬೇಕು.

ಸನ್ಯಾಸಿ:—ನೀನು ಹೇಳುವ ಮಾತು ತಿಳಿಯಿತು. ಇದರಿಂದ ನಿನಗೆ ಸಂತೋಷ ವಾಗುತ್ತಿದ್ದರೆ ನಾನು ಸ್ವೀಕರಿಸುವೆನು.

ಸನ್ಯಾಸಿಯು ಬಳೆಗಳನ್ನು ಕೈಯಲ್ಲಿ ತೆಗೆದುಕೊಂಡು ಅತ್ತಿತ್ತ ತಿರುಗಿಸಿ ನೋಡು ತ್ತಿರುವಾಗ ಒಂದು ಬಳೆಯು ಕೈತಪ್ಪಿ ತಟ್ಟನೆ ಕೆಳಗೆ ಬಿದ್ದು ಹರಿಯುತ್ತಿರುವ ನದಿ ಯೊಳಗೆ ಉರುಳಿತು. ಅರಸನು ಖಿನ್ನನಾಗಿ ಕೂಡಲೆ ಕೆಳಗಿಳಿದು ತನ್ನ ವಸ್ತ್ರಾಭರಣ ಗಳನ್ನೆಲ್ಲ ತೆಗೆದಿಟ್ಟು ನದಿಯೊಳಗೆ ಮುಳುಗಿ ಬಳೆಯನ್ನು ಹುಡುಕತೊಡಗಿದನು. ಇತ್ತ ಸನ್ಯಾಸಿಯು ಪುನಃ ತನ್ನ ಗ್ರಂಥವಾಚನದಲ್ಲಿ ತೊಡಗಿದನು. ಅರಸನು ಅನೇಕ ಸಾರೆ ಮುಳುಗಿ ಮುಳುಗಿ ಹುಡುಕಿ ದಣಿದು ಕ್ಷಣಹೊತ್ತು ದಂಡೆಗೆ ಬಂದು ಕುಳಿತು ವಿಶ್ರಾಂತಿಯನ್ನು ಪಡೆದು ಪುನಃ ನದಿಯೊಳಗಿಳಿದು ಮುಳುಗಿ ಬಳೆಯನ್ನು ಹುಡುಕಿದನು. ಎಷ್ಟು ಹೊತ್ತಾದರೂ ಬಳೆಯು ಸಿಗಲಿಲ್ಲ. ಕಡೆಗೆ ನಿರುಪಾಯನಾಗಿ ಸನ್ಯಾಸಿಯ ಬಳಿಗೆ ತಿರುಗಿ ಬಂದು " ಸ್ವಾಮೀ, ಒಂದು ಬಳೆ ಹೋಯಿತು. ಉಪಾಯವಿಲ್ಲ. ನಾನು ದುರ್ದೈವಿಯು. ತಮಗೆ ಎರಡೂ ಬಳೆಗಳನ್ನು ಅರ್ಪಿಸಿ ಧನ್ಯನಾಗುವಷ್ಟು ಪುಣ್ಯ ವಂತನಲ್ಲ " ಎಂದು ದುಃಖದಿಂದ ನಿಟ್ಟುಸುರು ಬಿಟ್ಟನು. ಮತ್ತು ' ಅದು ಬಿದ್ದಿರುವ ಸ್ಥಳ ವನ್ನು ತೋರಿಸಿದರೆ ಇನ್ನೊಮ್ಮೆ ಯತ್ನಮಾಡುವೆನು ' ಎಂದನು. ಸನ್ಯಾಸಿಯು ಅರಸನ ಸ್ಥಿತಿಯನ್ನು ನೋಡಿ— ' ಏನು? ಇಷ್ಟು ಶ್ರಮಬಟ್ಟರೂ ಸಿಗಲಿಲ್ಲವೇ ಇದೋ ನೋಡು ಹೀಗೆ ಇಲ್ಲಿಯೇ ಬಿದ್ದಿತು. ' ಎಂದು ಮೊದಲಿನ ಬಳೆಯು ಉರುಳಿದ ಸ್ಥಳವನ್ನು ತೋರಿ ಸುವದಕ್ಕಾಗಿ ತನ್ನ ಮುಂದಿರುವ ಎರಡನೆಯ ಬಳೆಯನ್ನು ನದಿಯೊಳಗೆ ಎಸೆದನು!

ಅರಸನು ಸನ್ಯಾಸಿಯ ಈ ತರದ ಕೃತಿಯನ್ನೂ ತನ್ನ ದುಃಖಮಯ ಮಾನಸಿಕ ಅವಸ್ಥೆಯನ್ನೂ ಆ ಸಾಧುಶ್ರೇಷ್ಠನ ನಿರ್ವಿಕಾರ ಚಿತ್ತವನ್ನೂ ಕ್ಷಣಹೊತ್ತು ಆಲೋ ಚಿಸಿ ನೋಡಿ ಜ್ಞಾನವನ್ನು ತಂದುಕೊಂಡು ಆ ಮಹಾತ್ಮನ ಪಾದಗಳನ್ನು ಹಿಡಿದು ತನ್ನನ್ನು ಈ ಪ್ರಾಪಂಚಿಕ ಕಷ್ಟದಿಂದ ಉದ್ಧರಿಸೆಂದು ಬೇಡಿಕೊಂಡನು.

**ಸಾಂ|| ಕಾಡಿನ ಗಿಡಮರಗಳೊಡನಾಡಿ ಶ್ರೀಹರಿಯ ।**
**ಪಾಡಿ ನಲಿವ ಜ್ಞಾನಿಗಳಿಗೆ ॥**
**ನಾಡಿನೊಡೆಯನೀವ ಬಿರುದಿನ ಬಳೆಗಳು ।**
**ಕಾಡುಗಲ್ ಹರಳಿಗೆ ಕಡೆಯೈ ॥ ೧ ||**

## ೩೯. ದೇವರು ಗುಡಿಯಲ್ಲಿ ಅಡಗಿರುವನೇ?



ಒಂದಕ್ಕೆ ಅವಂತೀನಗರದಲ್ಲಿ ಅಧಿಕಾರವೈಭವಗಳಲ್ಲಿ ಹೆಚ್ಚು ಅಭಿಮಾನವುಳ್ಳ ಅರಸನೊಬ್ಬನು ರಾಜ್ಯವಾಳುತ್ತಿದ್ದನು. ಅವನು ತನ್ನ ಅರಮನೆಗೆ ಸಮೀಪದಲ್ಲಿ ಲಕ್ಷಾವಧಿ ರೂಪಾಯಿಗಳನ್ನು ವೆಚ್ಚಮಾಡಿ ಬಹು ಸುಂದರವಾದೊಂದು ಶಿವಾಲಯವನ್ನು ಕಟ್ಟಿಸಿದನು. ದೂರದೂರದ ದೇಶಗಳಿಂದ ನಾನಾತೆರದ ಬಹು ಬೆಲೆಯುಳ್ಳ ಕಲ್ಲುಗಳನ್ನು ತರಿಸಿ ಕಲಾವಿದರಾದ ಕೆಲಸಿಗರನ್ನು ಕರೆಯಿಸಿ ನೋಡಲಿಕ್ಕೆ ತುಂಬಾ ರಮ್ಯವಾಗುವಂತೆಯೂ ವಿಶಾಲವಾಗಿಯೂ ಇರುವ ಗುಡಿಯನ್ನು ತನ್ನ ಅರಮನೆಗಿಂತಲೂ ಹೆಚ್ಚು ಸುಂದರವಾಗಿ ನಿರ್ಮಿಸಿದನು. ಕಾಶ್ಮೀರ ಶಿಲೆಯಿಂದ ಅತ್ಯಂತ ಮನೋಹರವಾಗಿರುವ ಶಿವನ ಪ್ರತಿಮೆಯನ್ನು ಕೆತ್ತಿಗೆಯ ಕಲೆಯಲ್ಲಿ ಕುಶಲರಾದ ಬಹು ಜನರ ಅಭಿಪ್ರಾಯದಂತೆಯೂ ಮೂರ್ತಿ ನಿರ್ಮಾಣ ಶಾಸ್ತ್ರಕ್ಕೆ ಅನುಗುಣವಾಗಿಯೂ ರಚಿಸಿ ಸ್ಥಾಪಿಸಿದನು. ಗುಡಿಯಲ್ಲಿ ಕಾಲಿಟ್ಟೊಡನೆಯೇ ಅದರ ಭವ್ಯತೆ ಮನೋಹರತೆಗಳಿಂದ ಮನಸ್ಸಿನಲ್ಲಿ ಆನಂದವಿಸ್ಮಯಗಳಿಂದೊಡಗೂಡಿದ ಭಕ್ತಿರಸವು ಪ್ರವಹಿಸುವಂತೆ ತೋರುವದು. ಅರಸನೂ ಆತನ ಪರಿವಾರದವರೂ ದಿನಾಲು ಈ ಶಿವಾಲಯಕ್ಕೆ ಬಂದು ದೇವರ ದರ್ಶನ ತೆಗೆದುಕೊಳ್ಳುವರು. ಗುಡಿಯನ್ನು ಉಡುಗಿ ನಿರ್ಮಲವಾಗಿಟ್ಟು ಅದನ್ನು ರಕ್ಷಿಸುವದಕ್ಕೆಂದು ಅನೇಕ ಸೇವಕರನ್ನು ನಿಯಮಿಸಿದನು. ತ್ರಿಕಾಲದಲ್ಲಿಯೂ ದೇವರಿಗೆ ಪೂಜಾವಿನಿಯೋಗಾದಿಗಳು ನಡೆಯುವದಕ್ಕಾಗಿ ಸಾಕಷ್ಟು ಹಣವನ್ನು ಕೊಡುತ್ತಿರುವಂತೆ ತನ್ನ ಬೊಕ್ಕಸದವರಿಗೆ ಆಜ್ಞಾಪಿಸಿದನು. ವೇದಶಾಸ್ತ್ರ ಪಾರಂಗತನಾದ ಬ್ರಾಹ್ಮಣನೊಬ್ಬನನ್ನು ದೇಶಾಂತರದಿಂದ ಕರೆಯಿಸಿ ಮೂರ್ತಿಯ ಪೂಜೆಗೆ ನಿಯಮಿಸಿ ಅವನಿಗೆ ತಕ್ಕ ವರ್ಷಾಶನವನ್ನು ಗೊತ್ತುಮಾಡಿಕೊಟ್ಟನು. ಗುಡಿಯ ಬಂಗಾರದ ಕಳಸವು ಊರಹೊರಗೆ ಹರದಾರಿಯ ದೂರದಿಂದಲೇ ಥಳಥಳಿಸಿ ಹೊಳೆದು ತೋರುತ್ತಿರುವದು.

ಅರಮನೆಯ ಸಮೀಪದಲ್ಲಿರುವ ಈ ಶಿವಾಲಯದ ಇದಿರಿಗೆ ತುಸು ದೂರದಲ್ಲಿ ರಾಜಮಾರ್ಗದ ಬದಿಯಲ್ಲಿ ವಿಸ್ತಾರವಾಗಿ ಬೆಳೆದಿರುವ ಒಂದು ಹಳೆಯ ಆಲದ ಮರವಿದ್ದಿತು. ಆ ಮರದ ಕೆಳಗೆ **ನರೋತ್ತಮ**ನೆಂಬ ಸನ್ಯಾಸಿಯೊಬ್ಬನು ಬಂದು ಇಳಿದುಕೊಂಡು ಜನರಿಗೆ ಧರ್ಮೋಪದೇಶ ಮಾಡುತ್ತಿದ್ದನು.

**ನರೋತ್ತಮನು** ದಿನಾಲು ಪ್ರಾತಃಕಾಲದಲ್ಲಿಯೂ ಸಾಯಂಕಾಲದಲ್ಲಿಯೂ ಪುರಾಣ ಪುಣ್ಯಕಥೆಗಳನ್ನು ಹೇಳಿ ಕೀರ್ತನಗಳನ್ನು ಹಾಡಿ ಜನರ ಮನಸ್ಸನ್ನು ಆನಂದಗೊಳಿಸುವದು. ಆತನ ಉಪದೇಶವನ್ನು ಕೇಳುವದಕ್ಕೆ ಜನರು ಗುಂಪು ಗುಂಪಾಗಿ ನೆರೆ

ಯತೊಡಗಿದರು. ಅರಸನ ಭವ್ಯವಾದ ಶಿವಾಲಯಕ್ಕೆ ಜನರು ಬರುವದು ಕಡಿಮೆ ಯಾಯಿತು. ಶಿವಾಲಯದ ಕಾವಲಿಗಿದ್ದ ರಾಜದೂತರು ತಮ್ಮೊಡೆಯನ ಬಳಿಗೆ ಹೋಗಿ ಈ ಸಂಗತಿಯನ್ನು ವಿಜ್ಞಾಪಿಸಿಕೊಂಡರು.

ಅರಸನು ಆ ಸನ್ಯಾಸಿಯನ್ನು ಕರೆದುಕೊಂಡು ಬಂದು ನಮ್ಮ ಶಿವಾಲಯದಲ್ಲಿ ಇಳಿಸಿಕೊಳ್ಳಿರೆಂದು ಅಜ್ಞಾಪಿಸಿದನು.

ರಾಜದೂತರು ನರೋತ್ತಮನ ಬಳಿಗೆ ಬಂದು ಅರಸನ ಅಪ್ಪಣೆಯನ್ನು ಅರುಹಿ ಶಿವಾಲಯಕ್ಕೆ ದಯಮಾಡಿಸಬೇಕೆಂದು ಕೇಳಿಕೊಂಡರು. ನರೋತ್ತಮನು ತಾನು ಶಿವಾಲಯಕ್ಕೆ ಬರುವದಿಲ್ಲವೆಂದೂ ಈಶ್ವರನು ನಿರ್ಮಿಸಿರುವ ಈ ಭವ್ಯವಾದ ಆಲದ ಮರದ ನೆರಳು ನಿಮ್ಮ ಶಿವಾಲಯದ ಸುಂದರವಾದ ನವರಂಗ ಮಂಟಪದ ಆಶ್ರಯ ಕ್ಕಿಂತಲೂ ಮನೋಹರವಾಗಿಯೂ ಸುಖಕರವಾಗಿಯೂ ಇರುವದೆಂದೂ ಸ್ಪಷ್ಟವಾಗಿ ಹೇಳಿ ಕಳುಹಿಸಿದನು. ರಾಜದೂತರು ನಿರುಪಾಯರಾಗಿ ಅರಸನ ಬಳಿಗೆ ತಿರುಗಿ ಬಂದು ನರೋತ್ತಮನು ಹೇಳಿದ ಮಾತುಗಳನ್ನು ಬಿನ್ನವಿಸಿದರು. ಅರಸನು ಅನ್ಯ ಉಪಾಯ ಗಾಣದೆ ತಾನೇ ಆತನ ಬಳಿಗೆ ಹೋಗಬೇಕೆಂದು ನಿಶ್ಚಯಿಸಿದನು.

ಮಧ್ಯಾಹ್ನದ ೫ ಗಂಟೆಯಾಗಿತ್ತು. ಇಳಿಹೊತ್ತಿನ ಸೂರ್ಯನ ಉಗ್ರವಾದ ಬಿಸಿ ಲಿನ ತಾಪವು ಕಡೆಮೆಯಾಗುತ್ತ ನಡೆದಿತ್ತು. ಅರಸನು ಮಂತ್ರಿ ಪರಿಜನರೊಂದಿಗೆ ಹೊರಟು ಮೊದಲು ತನ್ನ ಶಿವಾಲಯಕ್ಕೆ ಬಂದು ಅದರ ವ್ಯವಸ್ಥೆಯೆಲ್ಲ ಸರಿಯಾಗಿರುವ ದೆಂಬದನ್ನು ನೋಡಿಕೊಂಡು ನರೋತ್ತಮನ ಬಳಿಗೆ ಹೋಗಲು ಹೊರಟನು. ಶಿವಾಲ ಯದಲ್ಲಿ ವೇತನ ಕೊಟ್ಟು ನಿಯಮಿಸಿದ ಜನರ ಹೊರತು ಇನ್ನಾರೂ ಇರಲಿಲ್ಲ. ಅರ ಸನು ಶಿವಾಲಯದಿಂದ ಹೊರಟು ರಾಜಮಾರ್ಗಕ್ಕೆ ಬಂದು ನೋಡಲು ಇದಿರಿಗಿರುವ ಆಲದ ಮರದ ನೆರಳಿನಲ್ಲಿ ಸಾವಿರಾರು ಜನರು ಶಾಂತಚಿತ್ತದಿಂದ ಕುಳಿತು ನರೋತ್ತಮನು ಹಾಡುತ್ತಿರುವ ದೇವರ ಸ್ತೋತ್ರಗಳನ್ನು ಕೇಳುತ್ತಿದ್ದರು. ಅರಸನು ಹತ್ತರ ಬಂದಿರುವ ದನ್ನು ತಿಳಿದು ಜನರೆಲ್ಲರೂ ಎದ್ದು ನಿಂತರು. ನರೋತ್ತಮನು ತನ್ನ ಭಜನೆಯ ಕ್ರಮ ವನ್ನು ನಿಲ್ಲಿಸಲಿಲ್ಲ. ಕಡೆಗೆ ಅರಸನು ಆತನ ಬಳಿಗೆ ಹೋಗಿ ವಂದಿಸಿ “ಸ್ವಾಮೀ, ನಾನು ತಮ್ಮ ದರ್ಶನಾಪೇಕ್ಷೆಯಿಂದ ಬಂದಿರುವೆನು” ಎಂದ ಬಳಿಕ ಕುಳಿತುಕೊಳ್ಳಲು ಸ್ಥಳವನ್ನು ತೋರಿಸಿದನು.

ಅರಸು:—ಸ್ವಾಮೀ, ತಾವು ಈ ನಮ್ಮ ಶಿವಾಲಯವನ್ನು ನೋಡಿರುವಿರಲ್ಲವೇ? ತಾವು ಅಲ್ಲಿಗೆ ದಯಮಾಡಿಸಬೇಕು. ಭವ್ಯವಾದ ಶಿವಾಲಯದ ಚಂದ್ರಕಾಂತ ಶಿಲೆಯ ನೆಲಗಟ್ಟನ್ನು ಬಿಟ್ಟು ಇಂತಹ ಬಯಲಲ್ಲಿ ಇಂತಹ ಧೂಳಿಯಲ್ಲಿ ಈ ಜನರನ್ನೂ ಕೂಡ್ರಿಸಿ ಕೊಂಡು ತಾವು ಕುಳಿತಿರುವದು ಸರಿಯೋ?

ನರೋತ್ತಮ:—ಅರಸನೇ, ನಿನ್ನ ಅಭಿಪ್ರಾಯವನ್ನು ನಾನು ತಿಳಿದಿರುವೆನು. ನನಗೆ ಚಂದ್ರಕಾಂತ ಶಿಲೆಯ ನೆಲಗಟ್ಟೂ ಒಂದೇ, ಈ ರಾಜಮಾರ್ಗದ ಧೂಳಿಯಿಂದ ಮುಚ್ಚಿರುವ ಸ್ಥಳವೂ ಒಂದೇ. ದೇವರಿಲ್ಲದ ಬರಿಯ ಗುಡಿಯಲ್ಲಿ ಕುಳಿತು ನಾನು ಏನು ಮಾಡಲಿ?

ಅರಸು:—ದೇವರಿಲ್ಲದ ಗುಡಿ? ತಾವು ಆ ಸುಂದರವಾದ ಕಾಶ್ಮೀರಶಿಲೆಯ ಶಿವನ ಮೂರ್ತಿಯನ್ನು ನೋಡಿದಂತೆ ತೋರಲಿಲ್ಲ.

ನರೋತ್ತಮ ನಕ್ಕನು. ಮಹಾರಾಯಾ, ನಿನ್ನ ಆ ಭವ್ಯವಾದ ಗುಡಿಯೊಳಗೆ ಆ ಕಾಶ್ಮೀರಶಿಲೆಯ ಸುಂದರವಾದ ಮೂರ್ತಿಯಲ್ಲಿ ಜಗನ್ನಿಯಾಮಕನಾದ ಭಗವಂತನು ಅಡಗಿ ಕುಳಿತಿದ್ದರೆ ಈ ಜಗತ್ತಿನ ಕಾರ್ಯಕಲಾಪಗಳೆನ್ನೆಲ್ಲಾ ಯಾರು ನಡೆಯಿಸ ಬೇಕು? ಇನ್ನೂ ಒಂದು ಮಾತಿರುವದು. ನೀನು ಈ ಸುಂದರವಾದ ಶಿವಾಲಯವನ್ನು ಕಟ್ಟಿಸುವದಕ್ಕಾಗಿ ಲಕ್ಷಾವಧಿ ರೂಪಾಯಿಗಳನ್ನು ವೆಚ್ಚಮಾಡಿದ ವರ್ಷ ದೇಶದಲ್ಲಿ ಬರ ಬಿದ್ದುದರಿಂದ ನಿನ್ನ ಲಕ್ಷಾವಧಿ ಪ್ರಜೆಗಳು ಅನ್ನ-ನೀರುಗಳನ್ನು ಕಾಣದೆ ಸತ್ತಿರುವರು. ಪ್ರಜೆಗಳು ಕೊಟ್ಟಿರುವ ತೆರಿಗೆಯ ಹಣವನ್ನು ಅವರು ಉಪವಾಸ ಸಾಯುತ್ತಿರುವಾಗ ಬದುಕಿಸುವದಕ್ಕೆ ಉಪಯೋಗಿಸದೆ ಇಂತಹ ಆಡಂಬರದ ಕಾರ್ಯಕ್ಕಾಗಿ ವೆಚ್ಚಮಾಡು ವದು ಆ ದಯಾಮಯನ ಮನಸ್ಸಿಗೆ ಬರಬಹುದೇ? ಅಂದಮೇಲೆ ಆ ಶಿವಾಲಯದಲ್ಲಿ ಶಿವನು ಎಲ್ಲಿಂದ ಬರಬೇಕು.

ಅರಸನು ಕೋಪಗೊಂಡು 'ನೀನು ನನ್ನ ರಾಜ್ಯದಿಂದ ಹೊರಗೆ ನಡೆ' ಎಂದನು. ನರೋತ್ತಮನು:—(ಶಾಂತಚಿತ್ತದಿಂದ) "ಮಹಾರಾಜನೇ, ಜಗತ್ತಿನ ಸಕಲ ಚರಾಚರ ಗಳನ್ನು ಆ ದಯಾಮಯನೇ ಸೃಷ್ಟಿಸಿರುವನು. ನಾವೆಲ್ಲರೂ ಆತನ ಮಕ್ಕಳು. ಬರಗಾಲ ದಲ್ಲಿ ಕೂಳಿಲ್ಲದೆ ನರಳುತ್ತ ಪ್ರಾಣಬಿಡುವ ತನ್ನ ಮಕ್ಕಳನ್ನೂ ಅದೇಕಾಲಕ್ಕೆ ಅವರಿಂದ ಎತ್ತಿದ ತೆರಿಗೆಯ ಹಣವನ್ನು ನಿರರ್ಥಕವಾಗಿ ವೆಚ್ಚಮಾಡುವ ನಿನ್ನನ್ನೂ ನೋಡಿ ಆ ಪರ ಮೇಶ್ವರನು ಈ ಮೊದಲೇ ನಿನ್ನ ರಾಜ್ಯದಿಂದ ಹೊರಟುಹೋಗಿರುವನು. ಈಗ ಕಂಡದ್ದ ನಾಡಿದೆನೆಂದು ನನ್ನನ್ನೂ ರಾಜ್ಯದಿಂದ ಹೊರಡಿಸಿದೆ. ಒಳ್ಳೆಯದೇ ಆಯಿತು ಹೋಗಿ ಬರುತ್ತೇನೆ" ಎಂದು ನುಡಿದು ಹೊರಟುನಡೆದನು.

ಅರಸನು ಮುಖತಗ್ಗಿಸಿಕೊಂಡು ಅರಮನೆಯನ್ನು ಸೇರಿದನು.

**ಸಾಂ॥ ಧರೆಯನಾಳುವ ಪರಾತ್ಪರವಸ್ತು ಗುಡಿಯೊಳು।**
**ವರಶಿಲೆಯ ಮೂರ್ತಿಯಲಿ ನೆಲಸೆ॥**
**ಧರೆಯ ಕೋಟ್ಯನು ಕೋಟಿ ಜೀವಜಂತುಗಳನ್ನು।**
**ಪೊರೆವ ಭಾರವನಾರುವಹಿಸರ್ ॥ ೧ ॥**

---

## ೪೦. ಭಕ್ತಿ.



ಹಿಮಗಾಲವು ಕಳೆದು ಚಳಿಗಾಲವು ಆರಂಭವಾಯಿತು. ಉಪವನಗಳೊಳಗಿನ ಗಿಡಬಳ್ಳಿಗಳು ಕಳೆಗುಂದಿದವು. ಸದಾ ಅರಳಿದ ಹೂವುಗಳ ಸುವಾಸನೆಯಿಂದ ವಿರಾಜಿಸುತ್ತಿರುವ ಅರಸನ ಆರಾಮದೊಳಗಿನ ಗಿಡಗಳಲ್ಲಿಯೂ ಹೂಗಳಿರಲಿಲ್ಲ. ಸರೋವರದೊಳಗಿನ ಕಮಲದ ಬಳ್ಳಿಗಳು ಮೊಗ್ಗು ಬಿಡದಂತಾದವು. ಕಮಲಗಳಂತೂ ಒಂದೂ ಇರಲಿಲ್ಲ.

ಇಂತು ಹೇಮಂತರಾಜನ ಕಡು ಶಾಸನಕ್ಕೆ ಅಂಜಿ ಕಂಗೆಟ್ಟ ಗಿಡ ಬಳ್ಳಿಗಳೂ ಕೆರೆ ಸರೋವರಗಳೂ ಪುಷ್ಪಗಂಧವಿರಹಿತವಾಗಿ, ಮಕ್ಕಳಿಲ್ಲದ ಮನೆಯಂತೆ, ಚಂದ್ರನಿಲ್ಲದ ಇರುಳಿನಂತೆ, ತೇಜೋಹೀನವಾಗಿದ್ದವು. ಒಂದುದಿನ **ಸುದಾಸನೆಂಬ** ತೋಟಿಗನೊಬ್ಬನು ತನ್ನ ಉಪವನದೊಳಗಿನ ಸರೋವರದಲ್ಲಿ ಎಲ್ಲಿಯೋ ಒಂದು ಮೂಲೆಯಲ್ಲಿ ಅರಳಿನಿಂತಿರುವ ಸುಂದರವಾದೊಂದು ಕಮಲವನ್ನು ಆಯ್ದುತಂದು ಕಮಲಪತ್ರದಲ್ಲಿ ಮೆಲ್ಲಗೆ ಮರೆಮಾಡಿ ಕೈಯಲ್ಲಿ ಹಿಡಿದುಕೊಂಡು ಉಪವನದಿಂದ ಹೊರಗೆ ಬರುತ್ತಿದ್ದನು.

**ಸುದಾಸನು** ಉಪವನದಿಂದ ಹೊರಗೆ ಬರುವ ಹೊತ್ತಿಗೆ ಸರಿಯಾಗಿ ಒಬ್ಬ ದಾರಿಕಾರನು ಇದಿರಿಗೆ ಬಂದು ಆತನ ಕೈಯೊಳಗಿನ ಕಮಲವನ್ನು ನೋಡಿ "ಅಣ್ಣಾ, ಇದರ ಬೆಲೆಯೇನು? ನಾನು ಮಹಾಮಹಿಮನಾದ ಬುದ್ಧದೇವನ ದರ್ಶನಕ್ಕೆ ಹೊರಟಿರುವೆನು. ಚಳಿಗಾಲಲ್ಲಿ ಅಪರೂಪವಾಗಿ ಅರಳಿರುವ ಈ ಕಮಲವು ಆತನಿಗೆ ಅರ್ಪಿಸಲು ತಕ್ಕ ವಸ್ತುವಾಗಿದೆ" ಎಂದನು.

ಸುದಾಸ:—ಸ್ವಾಮೀ, ಇದರ ಬೆಲೆ ಒಂದು 'ಮಾಶ'(ಒಂದು ಬಂಗಾರದ ನಾಣ್ಯದ ಹೆಸರು) ವಾಗುವದು. ಇಷ್ಟು ಬೆಲೆಕೊಟ್ಟರೆ ಇದನ್ನು ನಿಮಗೆ ಕೊಡಲು ಅಡ್ಡಿಯಿಲ್ಲ. ಈ ಚಳಿಗಾಲದಲ್ಲಿ ಕಮಲವು ಅತ್ಯಂತ ದುರ್ಲಭವಾಗಿದೆ. ಕಮಲವೊಂದೇ ಏಕೆ ಯಾವ ಗಿಡ ಬಳ್ಳಿಗಳಿಗೂ ಹೂವೇ ಇಲ್ಲ.

ದಾರಿಕಾರನು ಅಷ್ಟು ಬೆಲೆಯನ್ನು ಕೊಡಲು ಒಪ್ಪಿಕೊಂಡನು. ಅದೇ ಸಮಯಕ್ಕೆ ಸರಿಯಾಗಿ ಆ ಊರ ಅರಸನು ಇದಿರಿಗೆ ಬಂದನು. ಅರಸನು ಸುದಾಸನೂ ದಾರಿಕಾರನೂ ನಡೆಯಿಸಿರುವ ಕಮಲದ ವ್ಯಾಪಾರವನ್ನು ನೋಡಿ ಲಗುಬಗೆಯಿಂದ ಬಂದು "ಅಣ್ಣಾ ನನಗೆ ಈ ಕಮಲವು ಅವಶ್ಯವಾಗಿ ಬೇಕಾಗಿದೆ. ನಾನು ಶ್ರೀಬುದ್ಧದೇವನ ದರ್ಶನಕ್ಕೆಂದು ಹೊರಟಿರುವೆನು. ಮಹಾತ್ಮರ ದರ್ಶನಕ್ಕೆ ಬರಿಗೈಯಿಂದ ಹೋಗಲಾಗದೆಂದು ನಿಯಮವಿದೆ. ಆದುದರಿಂದ ನೀನು ಹೇಳಿದಷ್ಟು ಬೆಲೆಯನ್ನು ಕೊಡುವೆನು. ಈ ಕಮಲವನ್ನು ನನಗೆ ಕೊಡು" ಎಂದನು. ಮತ್ತು ಎರಡು ಮಾಶಗಳನ್ನು ತೆಗೆದು ಸುದಾಸನಿಗೆ ಕೊಡಲು ಕೈನೀಡಿದನು. ಸುದಾಸನು ಆನಂದದಿಂದ ಅದನ್ನು ಸ್ವೀಕರಿಸಲು

ಕೈಯೆತ್ತಿದನು. ಕೂಡಲೆ ದಾರಿಕಾರನು "ತಪ್ಪೆ, ತಪ್ಪೆ, ನಾನು ನಿನಗೆ ನಾಲ್ಕು ಮೊಹರುಗಳನ್ನು ಕೊಡುವೆನು. ಬುದ್ಧದೇವನಿಗೆ ಅರ್ಪಿಸುವ ಈ ಕಮಲಕ್ಕೆ ಇದು ಅಷ್ಟೊಂದು ಹೆಚ್ಚಿನ ಬೆಲೆಯಲ್ಲ" ಎಂದನು.

ಅರಸನು ತಾನು ಎಂಟು ನಾಣ್ಯಗಳನ್ನು ಕೊಡುವೆನೆಂದನು.

ದಾರಿಕಾರನು ಹದಿನಾರು ನಾಣ್ಯಗಳನ್ನು ಕೊಡಲು ಸಮ್ಮತಿಸಿದನು.

ಅರಸನಿಗೂ ದಾರಿಕಾರನಿಗೂ ಮೇಲಾಟವುಂಟಾಗಿ ಪ್ರತಿಯೊಬ್ಬರು ಆ ಒಂದು ಕಮಲಕ್ಕೆ ಸಾವಿರಾರು ನಾಣ್ಯಗಳನ್ನು ಕೊಡಲು ಮುಂಬರಿದರು. ಸುದಾಸನು ಇವರ ಈ ತರದ ಮೇಲಾಟದ ರಹಸ್ಯವನ್ನು ಕ್ಷಣಹೊತ್ತು ಸುಮ್ಮನೆ ನಿಂತು ವಿಚಾರ ಮಾಡಿ ತಿಳಿದುಕೊಂಡನು. "ಮಹಾಮಹಿಮನಾದ ಬುದ್ಧದೇವನಿಗೆ ಅರ್ಪಿಸುವದಕ್ಕೆಂದು ಇವರಿಬ್ಬರು ಇಷ್ಟು ಪ್ರೀತಿಯಿಂದ ಈ ಕಮಲವನ್ನು ಇಷ್ಟು ಹೆಚ್ಚು ಬೆಲೆ ಕೊಟ್ಟು ಕೊಳ್ಳಲು ಸಿದ್ಧರಾಗಿರುವರು. ಅಂದಮೇಲೆ ಈ ಕಮಲವನ್ನು ಆ ಮಹಾಪುರುಷನಿಗೆ ಅರ್ಪಿಸುವದರಿಂದ ಸಾವಿರಾರು ನಾಣ್ಯಗಳಿಗಿಂತಲೂ ಹೆಚ್ಚಿನ ಪ್ರತಿಫಲವು ನಿಶ್ಚಿತವಾಗಿ ದೊರೆಯುತ್ತಿರಬೇಕಲ್ಲವೇ? ಅಂದಬಳಿಕ ನಾನು ಈ ಕಮಲವನ್ನು ಒಯ್ದು ಆ ಮಹಾತ್ಮನಿಗೆ ಅರ್ಪಿಸಿ ಧನ್ಯನಾಗಕೂಡದೇಕೆ? ಹೀಗೆಂದು ಯೋಚಿಸಿ ಸುದಾಸನು ಆ ಕಮಲವನ್ನು ಇಬ್ಬರಿಗೂ ಕೊಡದೆ ತಾನೇ ಶ್ರೀಮಾನ್ ಬುದ್ಧದೇವನ ಬಳಿಗೆ ಒಯ್ದನು.

ವಿಶಾಲವಾದ ಮಾವಿನ ಮರದ ನೆರಳಿನಲ್ಲಿ ಶ್ರೀಬುದ್ಧದೇವನು ಶಾಂತಿಯೇ ದೇಹವನ್ನು ಧರಿಸಿ ಕುಳಿತಿರುವದೋ ಎನ್ನುವಂತೆ ನಿಶ್ಚಲಚಿತ್ತನಾಗಿ ಕುಳಿತಿದ್ದನು. ಆತನ ಕಣ್ಣುಗಳು ನಕ್ಷತ್ರಗಳಂತೆ ಮಿನುಗುತ್ತಿದ್ದವು. ಸುದಾಸನು ಹತ್ತರ ಹೋಗಿ ತಾನು ತಂದಿದ್ದ ಕಮಲವನ್ನು ಅರ್ಪಿಸಿ ಸಾಷ್ಟಾಂಗವೆರಗಿ ನಿಂತುಕೊಂಡನು.

ಶ್ರೀಬುದ್ಧದೇವನು ಮಂದಹಾಸಗೂಡಿ "ಅಣ್ಣಾ, ನಿನಗೇನು ಬೇಕಾಗಿದೆ?" ಎಂದು ಪ್ರೀತಿಯಿಂದ ಕೇಳಿದನು.

ಸುದಾಸ:—ಸಾಕ್ಷಾತ್ ಭಗವತ್‌ಸ್ವರೂಪರಾದ ತಮ್ಮ ಪಾದಸ್ಪರ್ಶವಾಯಿತು. ನನಗೆ ಇಷ್ಟೇ ಸಾ[illegible]ರಮಾತ್ಮನ ಪಾದಸ್ಪರ್ಶಕ್ಕಿಂತಲೂ ಹೆಚ್ಚಿನದು ಈ ಜಗತ್ತಿನಲ್ಲಿ ಇನ್ನೇನಿದೆ?

ಭಾ॥ ಹರಿಯೆ ನಿನ್ನೊಳು ಭಕ್ತಿಮುಕ್ತಿಗೆ।
ಸರಳ ಮಾರ್ಗವಿದೆಂಬುದರಿಯದೆ।
ತಿರುತಿರುಗಿ ಮಾಯಾಪ್ರಪಂಚದಿ ಸುತ್ತಿ ಬೇಸತ್ತೆ॥
ಪರಮಭಕ್ತಿಯೊಳೀಗ ನಿನ್ನಯ।
ಚರಣ ತಲದಲಿ ಬಿದ್ದು ಬೇಡುವೆ।
ಪರಿಹರಿಸೊ ನರಜನ್ಮವನು ಕೊಂಡೀ ಸುಮಾಂಜಲಿಯ॥೧॥

